| | | ಶಾಲೆ/ಕಾಲೇಜು/ವಿದ್ಯಾರ್ಥಿನಿಲಯಗಳು |
|---|---|---|
| 12 | **(ಅ) ಅಲ್ಪಸಂಖ್ಯಾತರ ವಸತಿ ಶಾಲೆಗಳು:-** | ರಾಜ್ಯದಲ್ಲಿ ಮತೀಯ ಅಲ್ಪಸಂಖ್ಯಾತರ ಜನಾಂಗದವರಿಗೆ 6 ರಿಂದ 10ನೇ ತರಗತಿಯವರೆಗೆ ಉತ್ತಮ ಶಿಕ್ಷಣ ನೀಡುವ ದೃಷ್ಟಿಯಿಂದ ವಿವಿಧ ಜಿಲ್ಲೆ ಮತ್ತು ತಾಲ್ಲೂಕುಗಳಲ್ಲಿ 100 ಮೊರಾರ್ಜಿದೇಸಾಯಿ ವಸತಿ ಶಾಲೆಗಳು/**21** ಪದವಿ ಪೂರ್ವ ವಸತಿ ಕಾಲೇಜುಗಳು ಮತ್ತು **05** ಮುಸ್ಲಿಂ ವಸತಿ ಶಾಲೆಗಳು ಹಾಗೂ **08** ಅಲ್ಪಸಂಖ್ಯಾತರ ಮಾದರಿ ವಸತಿ ಶಾಲೆಗಳು (ನವೋದಯ) ಕಾರ್ಯನಿರ್ವಹಿಸುತ್ತಿವೆ.<br><br>**ವಸತಿ ಶಾಲೆಗಳಿಗೆ ಪ್ರವೇಶಕ್ಕಾಗಿ ಅನುಸರಿಸುವ ಮಾನದಂಡಗಳು:**<br><br>(1) ಈ ವಸತಿ ಶಾಲೆಗಳಲ್ಲಿ ಪ್ರವೇಶ ಪಡೆಯುವ ಅಭ್ಯರ್ಥಿಗಳು ರಾಜ್ಯದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಸಿಖ್, ಬೌದ್ಧ ಮತ್ತು ಪಾರ್ಸಿ ಈ ಸಮುದಾಯಕ್ಕೆ ಸೇರಿರಬೇಕು.<br>(2) ಈ ಶಾಲೆಯನ್ನು 6 ರಿಂದ 10 ನೇ ತರಗತಿಯವರೆಗೆ ನಡೆಸಲಾಗುವುದು. ಪ್ರತಿ ತರಗತಿಯ ವಿದ್ಯಾರ್ಥಿಗಳ ಸಂಖ್ಯೆ 50 ಆಗಿರುತ್ತದೆ. 6 ನೇ ತರಗತಿಗೆ ಸೇರ ಬಯಸುವ ಅಭ್ಯರ್ಥಿಗಳು ಸರ್ಕಾರದ ಅಥವಾ ಅಂಗೀಕೃತ ಶಾಲೆಗಳಲ್ಲಿ 5ನೇ ತರಗತಿಯಲ್ಲಿ ಉತ್ತೀರ್ಣರಾಗಿರಬೇಕು. ವಸತಿ ಶಾಲೆಗಳಲ್ಲಿ ಪ್ರವೇಶ ಪಡೆಯುವ ವಿದ್ಯಾರ್ಥಿಗಳು ಸಂಭಂದಿಸಿದ ಶಾಲೆಯ ಪ್ರಾಂಶುಪಾಲರು ಅಥವಾ ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿಗಳನ್ನು ಸಂಪರ್ಕಿಸಬೇಕು.<br>(3) ಪ್ರವೇಶ ಪರೀಕ್ಷೆಯನ್ನು ಕನ್ನಡ ಭಾಷೆ, ಗಣಿತ, ತ್ವರಿತ ಬರವಣಿಗೆ, ಸಾಮಾನ್ಯ ಜ್ಞಾನಗಳ ಮೇಲೆ ನಡೆಸಿ ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಮೌಖಿಕ ಪರೀಕ್ಷೆಗಳ ಮೂಲಕ ಅರ್ಹ ಅಭ್ಯರ್ಥಿಗಳಿಗೆ ಪ್ರವೇಶ ಕೊಡಬೇಕು.<br>(4) ಈ ಶಾಲೆಗಳು ಸರ್ಕಾರಿ ಶಾಲೆಗಳಾಗಿದ್ದು ಈ ಶಾಲೆಗಳಲ್ಲಿ ಭೋದಿಸುವ ಮಾಧ್ಯಮವು ಕನ್ನಡ/ಆಂಗ್ಲ ಆಗಿರುತ್ತದೆ. ಶಿಕ್ಷಣ ಇಲಾಖೆಯು ಕಾಲಕಾಲಕ್ಕೆ ನಮೂದಿಸಿರುವ ಪಠ್ಯ ಕ್ರಮದಂತೆಯೇ ಈ ವಸತಿ ಶಾಲೆಗಳಲ್ಲಿಯೂ ಸಿಲೆಬಸ್ ಇರುತ್ತದೆ.<br>(5) ಈ ವಸತಿ ಶಾಲೆಗಳಿಗೆ ಪ್ರವೇಶ ನೀಡುವ ವಿದ್ಯಾರ್ಥಿಗಳ ಕುಟುಂಬದ ವಾರ್ಷಿಕ ಆದಾಯವು ರೂ. 1.00 ಲಕ್ಷಕ್ಕೆ ಮೀರಿರಬಾರದು. ಶೇ.75 ರಷ್ಟು ಸ್ಥಾನಗಳನ್ನು (ಮುಸ್ಲಿಂ-77%, ಕ್ರಿಶ್ಚಿಯನ್-14%, ಜೈನ್-6% ಸಿಖ್-1%, ಬೌದ್ಧ-2%) ಅಲ್ಪಸಂಖ್ಯಾತರಿಗೆ ನೀಡಬೇಕು. ಅಲ್ಪಸಂಖ್ಯಾತರ ಸಮುದಾಯ ನಿರ್ದಿಷ್ಟ ಸಮುದಾಯದ ಅಭ್ಯರ್ಥಿಗಳು ದೊರೆಯದಿದ್ದಲ್ಲಿ ಲಭ್ಯವಿರುವ ಇತರೆ ಅಲ್ಪಸಂಖ್ಯಾತರ ಅರ್ಹ ಅಭ್ಯರ್ಥಿಗಳಿಗೆ ಪ್ರವೇಶ ನೀಡಬಹುದು. ಶೇ.25 ರಷ್ಟು ಸ್ಥಾನಗಳನ್ನು ಹಿಂದುಳಿದ ವರ್ಗಗಳ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗದ ಅಭ್ಯರ್ಥಿಗಳಿಗೆ ನೀಡತಕ್ಕದ್ದು.<br>(6) ಈ ವಸತಿ ಶಾಲೆ ಇರುವ ಕಂದಾಯ ವಿಭಾಗದ ವಿದ್ಯಾರ್ಥಿಗಳಿಗೆ ಮಾತ್ರ ಪ್ರವೇಶ ನೀಡುವುದು ಉಳಿದಲ್ಲಿ ಇತರೆ ವಿಭಾಗದ ವಿದ್ಯಾರ್ಥಿಗಳಿಗೆ ಅವಕಾಶ ನೀಡುವುದು.<br>(7) ಈ ವಸತಿ ಶಾಲೆಗಳಲ್ಲಿ ಅಭ್ಯರ್ಥಿಗಳು ಅನುತ್ತೀರ್ಣರಾದಲ್ಲಿ ಒಂದು ಶೈಕ್ಷಣಿಕ ಅವಧಿಗೆ ಮಾತ್ರ ಮುಂದುವರೆಸಬಹುದು.<br>(8) ಈ ವಸತಿ ಶಾಲೆಗಳಲ್ಲಿ ಪ್ರವೇಶ ಪಡೆಯುವ ಅಭ್ಯರ್ಥಿಯು ಮೆರಿಟ್ ವಿದ್ಯಾರ್ಥಿವೇತನ ಹೊರತುಪಡಿಸಿ ಬೇರೆ ಯಾವುದೇ ವಿದ್ಯಾರ್ಥಿವೇತನವನ್ನು ಪಡೆಯಲು ಅರ್ಹವಿರುವುದಿಲ್ಲ.<br>(9) ಸಾಧ್ಯವಾದಷ್ಟು ಶೇ. 80% ರಷ್ಟು ಸ್ಥಾನಗಳನ್ನು ಗ್ರಾಮೀಣ ಅಭ್ಯರ್ಥಿಗಳಿಗೆ ನೀಡಬೇಕು.<br>(10) ಈ ವಸತಿ ಶಾಲೆಗೆ ಪ್ರವೇಶ ಬಯಸುವ ಅಭ್ಯರ್ಥಿಗಳು ಜಿಲ್ಲಾ ಅಲ್ಪಸಂಖ್ಯಾತರ ಅಧಿಕಾರಿಗಳಿಗೆ ನಿಗದಿತ ನಮೂನೆಯಲ್ಲಿ ಅರ್ಜಿಯನ್ನು 5ನೇ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದ ಶಾಲೆಯ ಮುಖ್ಯೋಪಾಧ್ಯಾಯರಿಂದ ಸರ್ಕಾರಿ/ಅಂಗೀಕೃತ ಶಾಲೆಗೆ ಸೇರಿದ ವಿದ್ಯಾರ್ಥಿಗಳೆಂದು ಧೃಡೀಕರಣ ಪತ್ರ, ವಯಸ್ಸಿನ ಪ್ರಮಾಣ ಪತ್ರ ಹಾಗೂ ತಹಶೀಲ್ದಾರ್‌ರವರಿಂದ ಪಡೆದ ಜಾತಿ/ಆದಾಯ ಪ್ರಮಾಣ ಪತ್ರಗಳೊಂದಿಗೆ ಸಲ್ಲಿಸಬೇಕು.<br>(11) ಮೊರಾರ್ಜಿದೇಸಾಯಿ ವಸತಿ ಶಾಲೆಗಳಲ್ಲಿ ಸ್ಥಳೀಯ ಶಾಸಕರು, ಶಿಫಾರಸ್ಸು ಮಾಡುವ ಇಬ್ಬರು ಅಲ್ಪಸಂಖ್ಯಾತ ವಿದ್ಯಾರ್ಥಿಗಳಿಗೆ ಪ್ರವೇಶ ನೀಡಲು ಅವಕಾಶ ಕಲ್ಪಿಸುವಂತೆ ಹಾಗೂ ವಸತಿ ಶಾಲೆಗಳಿಗೆ ಸಾಧ್ಯವಾದಷ್ಟು ಅದೇ ತಾಲ್ಲೂಕಿನ ವಿದ್ಯಾರ್ಥಿಗಳಿಗೆ ಪ್ರವೇಶ ನೀಡುವುದು. |

| | | |
|---|---|---|
| 13 | (ಆ) ಮೌಲಾನಾ ಅಜಾದ್ ಮಾದರಿ ಶಾಲೆಗಳ ನಿರ್ವಹಣೆ:- | 200 ಮೌಲಾನಾ ಅಜಾದ್ ಮಾದರಿ ಶಾಲೆಗಳನ್ನು 60 ಸಂಖ್ಯಾಬಲದೊಂದಿಗೆ 6ನೇ ತರಗತಿಯಿಂದ ಆಂಗ್ಲ ಮಾಧ್ಯಮದಲ್ಲಿ ಪ್ರಾರಂಭಿಸಲು ಸರ್ಕಾರ ಮಂಜೂರಾತಿ ನೀಡಿ ಆದೇಶಿಸಿದೆ.<br><br>**ಷರತ್ತುಗಳು:-**<br>1. ಪ್ರಸ್ತುತ ಮಂಜೂರು ಮಾಡಿರುವ ಮೌಲಾನಾ ಅಜಾದ್ ಮಾದರಿ ಶಾಲೆಗಳನ್ನು ಪ್ರಾರಂಭಿಸಿ ಎಲ್ಲಾ ಮೂಲಭೂತ ಸೌಕರ್ಯಗಳನ್ನು ನಿರ್ದೇಶಕರು, ಅಲ್ಪಸಂಖ್ಯಾತರ ನಿರ್ದೇಶನಾಲಯ, ಬೆಂಗಳೂರು ರವರು ಕ್ರಮ ಕೈಗೊಂಡು ಈ ಕೆಳಕಂಡ ಷರತ್ತುಗಳನ್ವಯ ನಿರ್ವಹಿಸತಕ್ಕದ್ದು.<br>2. ಸದರಿ ಶಾಲೆಗಳನ್ನು ಈಗಾಗಲೇ ವಿದ್ಯಾರ್ಥಿಗಳ ಕೊರತೆಯಿಂದ ಮುಚ್ಚಲಟ್ಟಿರುವ ಸರ್ಕಾರಿ ಉರ್ದು ಶಾಲೆ ಅಥವಾ ಕಡಿಮೆ ವಿದ್ಯಾರ್ಥಿಗಳು ಇರುವ ಉರ್ದು ಶಾಲೆಗಳಲ್ಲಿ ಪ್ರಾರಂಭಿಸಲು ಆದ್ಯತೆ ನೀಡುವುದು.<br>3. ಉರ್ದು ಶಾಲೆ ಲಭ್ಯವಿಲ್ಲದ ಸಂದರ್ಭದಲ್ಲಿ ಅಲ್ಪಸಂಖ್ಯಾತರ ಖಾಲಿ ಇರುವ ಕಟ್ಟಡದಲ್ಲಿ ಅಥವಾ ಬಾಡಿಗೆ ಕಟ್ಟಡದಲ್ಲಿ ಪ್ರಾರಂಭಿಸುವುದು.<br>4. ಪ್ರಥಮ ವರ್ಷದಲ್ಲಿ 6ನೇ ತರಗತಿಯಿಂದ ಆಂಗ್ಲ ಮಾಧ್ಯಮದಲ್ಲಿ ಪ್ರಾರಂಭಿಸಿ ನಂತರ ವರ್ಷಗಳಲ್ಲಿ 10ನೇ ತರಗತಿಯವರೆಗೆ ವಿಸ್ತರಿಸುವುದು.<br>5. ಸದರಿ ಶಾಲೆಗಳಲ್ಲಿ ಪ್ರತಿ ತರಗತಿಗೆ 60 ಸಂಖ್ಯಾಬಲ ಮಂಜೂರು ಮಾಡಲಾಗಿದ್ದು, ದಾಖಲಾತಿಗಳನ್ನು ಶೇ 75% ರಷ್ಟು ಅಲ್ಪಸಂಖ್ಯಾತರ ಸಮುದಾಯಗಳಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧ, ಸಿಖ್ ಮತ್ತು ಪಾರ್ಸಿ ವಿದ್ಯಾರ್ಥಿಗಳಿಗೆ ಹಾಗೂ ಶೇ 25% ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಈಗಾಗಲೇ ಅಲ್ಪಸಂಖ್ಯಾತರ ವಸತಿ ಶಾಲೆಗಳಲ್ಲಿ ನಿಗದಿಪಡಿಸಿರುವ ಅನುಪಾತದಲ್ಲಿ ಪ್ರವೇಶ ಪಡೆಯುವುದು ಹಾಗೂ ಪ್ರತಿ ತರಗತಿಯಲ್ಲಿ ಹೆಣ್ಣು ಮಕ್ಕಳಿಗೆ ಶೇ 50% ಮೀಸಲಿರಿಸುವುದು.<br>6. ಪ್ರತಿ ಶೈಕ್ಷಣಿಕ ವರ್ಷದ ಪ್ರಾರಂಭದಲ್ಲೇ ವಿದ್ಯಾರ್ಥಿಗಳಿಗೆ ಪಠ್ಯಪುಸ್ತಕ, ಸಮವಸ್ತ್ರ, ಶುದ್ಧ ಕುಡಿಯುವ ನೀರಿನ ಘಟಕ, ಟೇಬಲ್, ಚೇರ್, ಲೇಖನ ಸಾಮಗ್ರಿ, ಕಂಪ್ಯೂಟರ್, ಪ್ರಿಂಟರ್, ಯು.ಪಿ.ಎಸ್‌ಗಳನ್ನು ಅಳವಡಿಸುವುದು ಸಿ.ಸಿ ಕ್ಯಾಮರ ಅಳವಡಿಸುವುದು ಇತ್ಯಾದಿಗಳನ್ನು ಪೂರೈಸತಕ್ಕದ್ದು.<br>7. ಸರ್ಕಾರಿ ಶಾಲೆಗಳಲ್ಲಿ ನೀಡುವ ಮಧ್ಯಾಹ್ನ ಉಪಹಾರ ಮತ್ತು ಕ್ಷೀರ ಭಾಗ್ಯ ಯೋಜನೆ ಮಾದರಿಯಲ್ಲಿ ಈ ಶಾಲೆಗಳಲ್ಲಿಯೂ ಸೌಲಭ್ಯ ಒದಗಿಸುವುದು.<br>8. ಕಾಲ ಕಾಲಕ್ಕೆ ವಸತಿ ಶಾಲೆಗಳಿಗೆ ಒದಗಿಸಿದ ಅನುದಾನದಲ್ಲಿ ನಿರ್ವಹಣೆ ವೆಚ್ಚ, ಸಿಬ್ಬಂದಿ ವೇತನ, ಎಲ್ಲಾ ಮೂಲಭೂತ ಸೌಕರ್ಯ ನೀಡತಕ್ಕದ್ದು.<br>9. ಪ್ರತಿ ವಸತಿ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಭೋಧಕ ಮತ್ತು ಭೋಧಕೇತರ ಸಿಬ್ಬಂದಿಗಳಿಗೆ ಕಾಲ ಕಾಲಕ್ಕೆ ತರಬೇತಿಯನ್ನು ನೀಡತಕ್ಕದ್ದು.<br>10. ಈ ವಸತಿ ಶಾಲೆಗಳನ್ನು ನಿರ್ಮಿಸಲು ಅಗತ್ಯವಾದ ನಿವೇಶನ ಮತ್ತು ಭೂಮಿಯನ್ನು ಸರ್ಕಾರಿ, ಅರೆ ಸರ್ಕಾರಿ ಅಥವಾ ಖಾಸಗಿಯವರಿಂದ ಪಡೆದುಕೊಳ್ಳಲು, ಕಟ್ಟಡ ನಿರ್ಮಿಸಲು ನಿರ್ದೇಶಕರು ಅಲ್ಪಸಂಖ್ಯಾತರ ನಿರ್ದೇಶನಾಲಯ, ಬೆಂಗಳೂರು ರವರು ಕ್ರಮವಹಿಸತಕ್ಕದ್ದು.<br>11. ಖಾಯಂ ಭೋಧಕ/ಭೋಧಕೇತರ ಸಿಬ್ಬಂದಿಗಳನ್ನು ನೇಮಕ ಮಾಡಿಕೊಳ್ಳಲು ಕ್ರಮವಹಿಸತಕ್ಕದ್ದು. ಖಾಯಂ ಸಿಬ್ಬಂದಿ ನೇಮಕವಾಗುವವರೆಗೆ ಹೊರಗುತ್ತಿಗೆ /ಶಿಕ್ಷಣ ಇಲಾಖೆ ಮಾದರಿಯಲ್ಲಿ ಅತಿಥಿ ಶಿಕ್ಷಕ/ಸಿಬ್ಬಂದಿಯನ್ನು ಪಡೆದು ನಡೆಸಲು ಕ್ರಮವಹಿಸತಕ್ಕದ್ದು.<br>12. ಉರ್ದು ಶಾಲೆ ಸ್ವಂತ ಕಟ್ಟಡ ಇರುವ ಕಡೆ ಹೆಚ್ಚುವರಿ ಕೊಠಡಿ, ಶೌಚಾಲಯ, ಕಾಂಪೌಂಡ್ ಗೋಡೆ, ಸುಣ್ಣ ಬಣ್ಣ ಹಾಗೂ ಇತರೆ ಅಗತ್ಯ ದುರಸ್ಥಿಗಾಗಿ ನಿರ್ದೇಶಕರು ಕ್ರಮವಹಿಸತಕ್ಕದ್ದು.<br>13. ಮೌಲಾನಾ ಅಜಾದ್ ಮಾದರಿ ಶಾಲೆಗಳಲ್ಲಿ ಹುದ್ದೆಗಳ ಸೃಜನೆಗೆ ಸಂಬಂಧಿಸಿದಂತೆ ಪೂರ್ಣ ಮಾಹಿತಿಯೊಂದಿಗೆ ಪ್ರತ್ಯೇಕ ಪ್ರಸ್ತಾವನೆಯನ್ನು ಸಲ್ಲಿಸುವುದು. |

| | | |
|---|---|---|
| 14 | **(ಇ) ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು:-** | ಅಲ್ಪಸಂಖ್ಯಾತ ಸಮುದಾಯಕ್ಕ ಸೇರಿದ ವಿದ್ಯಾರ್ಥಿಗಳು ಅವರ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣವನ್ನು ಮುಂದುವರೆಸಲು ಪ್ರೋತ್ಸಾಹಿಸುವ ಸಲುವಾಗಿ ಮೆಟ್ರಿಕ್ ಪೂರ್ವ ಬಾಲಕ/ಬಾಲಕಿಯರ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಿ ನಿರ್ವಹಿಸಲಾಗುತ್ತಿದೆ. ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯಡಿ **48** ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳಿರುತ್ತದೆ.<br>**ಅನುಸರಿಸುವ ಮಾನದಂಡಗಳು:-**<br>1. ವಿದ್ಯಾರ್ಥಿಗಳು ಮತೀಯ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದ್ದು ರಾಜ್ಯದ ನಿವಾಸಿಯಾಗಿರಬೇಕು.<br>2. ವಿದ್ಯಾರ್ಥಿಗಳು ಸರ್ಕಾರಿ ಅಥವಾ ಅಂಗೀಕೃತ ಶಾಲೆಗಳಲ್ಲಿ ಮೆಟ್ರಿಕ್ ಪೂರ್ವ ತರಗತಿಗಳಲ್ಲಿ ಅಭ್ಯಾಸ ಮಾಡುತ್ತಿರಬೇಕು.<br>3. ವಿದ್ಯಾರ್ಥಿಗಳ ಕುಟುಂಬದ ವಾರ್ಷಿಕ ವರಮಾನವು ರೂ.44,500/-ಗಳು ಹಾಗೂ ಪ್ರವರ್ಗ-1ಕ್ಕೆ ರೂ. 1.00 ಲಕ್ಷಕ್ಕೆ ಮೀರಬಾರದು.<br>4. ಪ್ರತಿ ವಿದ್ಯಾರ್ಥಿನಿಲಯಗಳಲ್ಲಿ ಶೇ. 75 ರಷ್ಟು ಸ್ಥಾನಗಳನ್ನು ಅಲ್ಪಸಂಖ್ಯಾತರ ಜನಾಂಗದ ವಿದ್ಯಾರ್ಥಿಗಳಿಗೆ ಹಾಗೂ ಶೇ. 25 ರಷ್ಟು ಸ್ಥಾನಗಳನ್ನು ಹಿಂದುಳಿದ ವರ್ಗಗಳ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ವಿದ್ಯಾರ್ಥಿಗಳಿಗೆ ನೀಡುವುದು.<br>5. ಪ್ರತಿ ವಿದ್ಯಾರ್ಥಿನಿಲಯಗಳಲ್ಲಿ ಮುಸ್ಲಿಂ-ಶೇ.82, ಕ್ರಿಶ್ಚಿಯನ್ ಶೇ.12, ಜೈನ್ ಶೇ.4 ಬೌದ್ಧ ಶೇ.1 ಮತ್ತು ಸಿಖ್‌ರಿಗೆ ಶೇ. 1ರಷ್ಟು ಪ್ರವೇಶ ನೀಡುವುದು. ನಿರ್ದಿಷ್ಟ ಜನಾಂಗದ ವಿದ್ಯಾರ್ಥಿಗಳಿಂದ ಮೇಲಿನ ಪ್ರಮಾಣದಲ್ಲಿ ಅರ್ಜಿಗಳು ಬಾರದಿದ್ದಲ್ಲಿ ಲಭ್ಯವಿರುವ ಇತರೆ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಂದ ಭರ್ತಿ ಮಾಡತಕ್ಕದ್ದು.<br>6. ವಿದ್ಯಾರ್ಥಿನಿಲಯಗಳಲ್ಲಿ ಗ್ರಾಮೀಣ ಪ್ರದೇಶದ ಅಭ್ಯರ್ಥಿಗಳಿಗೆ ಶೇ.90 ಹಾಗೂ ಪಟ್ಟಣ ಪ್ರದೇಶದ ಅಭ್ಯರ್ಥಿಗಳಿಗೆ ಶೇ. 10ರಷ್ಟು ಸ್ಥಾನಗಳನ್ನು ನೀಡಬೇಕು.<br>7. ವಿದ್ಯಾರ್ಥಿನಿಲಯಕ್ಕೆ ಪ್ರವೇಶ ಪಡೆಯುವ ಅಭ್ಯರ್ಥಿಗಳು ತಮ್ಮ ಹಿಂದಿನ ಸಾಲಿನ ವಾರ್ಷಿಕ ಪರೀಕ್ಷೆಯಲ್ಲಿ ಎಲ್ಲಾ ವಿಷಯದಲ್ಲಿ ಉತ್ತೀರ್ಣರಾಗಿರಬೇಕು.<br>8. ಹಿಂದುಳಿದ ವರ್ಗಗಳ ಇಲಾಖೆಯ ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯ ನಿಯಮಾನುಸಾರ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವುದು. |
| 15 | **(ಈ) ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳ ಪ್ರವೇಶಕ್ಕಾಗಿ** | ಸರ್ಕಾರಿ /ಸರ್ಕಾರಿ ಅಂಗೀಕೃತ ಶಿಕ್ಷಣ ಸಂಸ್ಥೆಗಳಲ್ಲಿ ಮೆಟ್ರಿಕ್ ನಂತರದ ಕೋರ್ಸುಗಳಾದ ಪಿಯುಸಿ, ಪದವಿ, ಸ್ನಾತಕೋತ್ತರ ಪದವಿ, ಎಂಬಿಬಿಎಸ್, ಡಿಪ್ಲೋಮ, ವೃತ್ತಿಶಿಕ್ಷಣ ಇತ್ಯಾದಿ ಕೋರ್ಸುಗಳಲ್ಲಿ ವ್ಯಾಸಂಗ ಮಾಡುತ್ತಿರುವ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗಾಗಿ 256 ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಿ ಪ್ರವೇಶಾವಕಾಶ ಕಲ್ಪಿಸಲಾಗಿದೆ.<br>**ಅನುಸರಿಸುವ ಮಾನದಂಡಗಳು:-**<br>(1) ವಿದ್ಯಾರ್ಥಿಗಳು ಮತೀಯ ಅಲ್ಪಸಂಖ್ಯಾತರ ವರ್ಗಕ್ಕೆ ಸೇರಿದ್ದು ರಾಜ್ಯದ ನಿವಾಸಿಯಾಗಿರಬೇಕು.<br>(2) ವಿದ್ಯಾರ್ಥಿಗಳು ಸರ್ಕಾರಿ ಅಥವಾ ಅಂಗೀಕೃತ ಕಾಲೇಜುಗಳಲ್ಲಿ ಮೆಟ್ರಿಕ್ ನಂತರದ ತರಗತಿಗಳಲ್ಲಿ ಅಭ್ಯಾಸ ಮಾಡುತ್ತಿರಬೇಕು.<br>(3) ವಿದ್ಯಾರ್ಥಿಗಳ ಕುಟುಂಬದ ವಾರ್ಷಿಕ ವರಮಾನವು ರೂ.44,500/-ಗಳು ಹಾಗೂ ಪ್ರವರ್ಗ-1ಕ್ಕೆ ರೂ. 1.00 ಲಕ್ಷಕ್ಕೆ ಮೀರಬಾರದು.<br>(4) ಪ್ರತಿ ವಿದ್ಯಾರ್ಥಿನಿಲಯಗಳಲ್ಲಿ ಶೇ.75 ರಷ್ಟು ಸ್ಥಾನಗಳನ್ನು ಅಲ್ಪಸಂಖ್ಯಾತರ ಜನಾಂಗದ ವಿದ್ಯಾರ್ಥಿಗಳಿಗೆ ಹಾಗೂ ಶೇ.25 ರಷ್ಟು ಸ್ಥಾನಗಳನ್ನು ಹಿಂದುಳಿದ ವರ್ಗಗಳ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ ವಿದ್ಯಾರ್ಥಿಗಳಿಗೆ ನೀಡುವುದು.<br>(5) ಪ್ರತಿ ವಿದ್ಯಾರ್ಥಿನಿಲಯಗಳಲ್ಲಿ ಮುಸ್ಲಿಂ-ಶೇ.82, ಕ್ರಿಶ್ಚಿಯನ್ ಶೇ.12, ಜೈನ್-ಶೇ-4, ಬೌದ್ಧ-ಶೇ.1 ಮತ್ತು ಸಿಖ್‌ರಿಗೆ ಶೇ.1 ರಷ್ಟು ಪ್ರವೇಶ ನೀಡುವುದು. ನಿರ್ದಿಷ್ಟ ಜನಾಂಗದ ವಿದ್ಯಾರ್ಥಿಗಳಿಂದ ಸಾಕಷ್ಟು ಪ್ರಮಾಣದಲ್ಲಿ ಅರ್ಜಿಗಳು ಬಾರದಿದ್ದಲ್ಲಿ ಲಭ್ಯವಿರುವ ಇತರೆ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಂದ ಭರ್ತಿ ಮಾಡತಕ್ಕದ್ದು.<br>(6) ವಿದ್ಯಾರ್ಥಿನಿಲಯಗಳಲ್ಲಿ ಗ್ರಾಮೀಣ ಪ್ರದೇಶದ ಅಭ್ಯರ್ಥಿಗಳಿಗೆ ಶೇ.85-90 ಹಾಗೂ ಪಟ್ಟಣ ಪ್ರದೇಶದ ಅಭ್ಯರ್ಥಿಗಳಿಗೆ ಶೇ.10-15 ರಷ್ಟು ಸ್ಥಾನಗಳನ್ನು ನೀಡಬೇಕು. |

| | | |
|---|---|---|
| | | (7) ವಿದ್ಯಾರ್ಥಿನಿಲಯಕ್ಕೆ ಪ್ರವೇಶ ಪಡೆಯುವ ಅಭ್ಯರ್ಥಿಗಳು ತಮ್ಮ ಹಿಂದಿನ ಸಾಲಿನ ವಾರ್ಷಿಕ ಪರೀಕ್ಷೆಯಲ್ಲಿ ಎಲ್ಲಾ ವಿಷಯದಲ್ಲಿ ಉತ್ತೀರ್ಣರಾಗಿರಬೇಕು.<br>(8) ಜಿಲ್ಲಾ ಮಟ್ಟದ ಆಯ್ಕೆ ಸಮಿತಿಯು ನಿಯಮಾನುಸಾರ ವಿದ್ಯಾರ್ಥಿಗಳನ್ನು ಆಯ್ಕೆ ಮಾಡುವುದು. |
| 16 | <u>(ಉ) ಉದ್ಯೋಗಸ್ಥ ಮಹಿಳೆಯರಿಗೆ ಹಾಸ್ಟೆಲ್‌ಗಳು:-</u> | ಬೆಂಗಳೂರು ಹಾಗೂ ಮಹಾನಗರ ಪಾಲಿಕೆ ವ್ಯಾಪ್ತಿಗಳಲ್ಲಿ ದುಡಿಯುವ ಮಹಿಳೆಯರ ಸುರಕ್ಷತೆಯ ದೃಷ್ಟಿಯಿಂದ ಮಹಿಳೆಯರಿಗಾಗಿ 10 ಉದ್ಯೋಗಸ್ಥ ಮಹಿಳೆಯ ಹಾಸ್ಟೆಲ್‌ಗಳನ್ನು ತೆರೆಯಲಾಗಿದೆ. |
| 17 | <u>(ಊ) ವಿದ್ಯಾಸಿರಿ ಯೋಜನೆ:-</u> | ವಿದ್ಯಾಸಿರಿ ಯೋಜನೆಯು ವಿದ್ಯಾಭ್ಯಾಸ ಮಾಡುತ್ತಿರುವ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಮೀಸಲಿರಿಸಲಾಗಿದೆ. ಮೆಟ್ರಿಕ್ ನಂತರದ ಕೋರ್ಸ್‌ಗಳಲ್ಲಿ (ಪಿ.ಯು.ಸಿ ಯಿಂದ ಪಿ.ಹೆಚ್.ಡಿವರೆಗೂ) ಸರ್ಕಾರಿ, ಅನುದಾನ/ಅನುದಾನ ರಹಿತ ಕಾಲೇಜು/ಸಂಸ್ಥೆಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದು ಅಂತಹ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿನಿಲಯದ ಸೌಕರ್ಯ ತಲುಪದೇ ಇರುವಂತಹ ವಿದ್ಯಾರ್ಥಿಗಳಿಗೆ ಈ ಯೋಜನೆ ಅನುಷ್ಠಾನಗೊಳಿಸಲಾಗಿದೆ.<br>**<u>ಅರ್ಹತೆ ಮತ್ತು ನಿಬಂಧನೆಗಳು:-</u>**<br>1. ವಿದ್ಯಾರ್ಥಿಯು ಕರ್ನಾಟಕ ರಾಜ್ಯ ನಿವಾಸಿಯಾಗಿರಬೇಕು.<br>2. ವಿದ್ಯಾರ್ಥಿಯ ಕುಟುಂಬದ ವಾರ್ಷಿಕ ವರಮಾನವು 2 ಲಕ್ಷಕ್ಕಿಂತ ಕಡಿಮೆಯಾಗಿರಬೇಕು.<br>3. ಪ್ರವರ್ಗ-1 ಮತ್ತು ಕ್ರೈಸ್ತ ಸಮುದಾಯಕ್ಕೆ ಪರಿವರ್ತನೆಯಾಗಿರುವ ವಿದ್ಯಾರ್ಥಿಗಳ ವಾರ್ಷಿಕ ವರಮಾನ 2.50 ಕ್ಕಿಂತ ಕಡಿಮೆಯಿರಬೇಕು.<br>4. ವಿದ್ಯಾರ್ಥಿಗಳು ಗ್ರಾಮೀಣ ಪ್ರದೇಶದವರಾಗಿದ್ದು ಅವರ ನಿಲಯದಿಂದ ಅವರ ಕಾಲೇಜು 5 ಕಿ.ಮೀ ಕಿಂತ ದೂರವಿರಬೇಕು.<br>5. ವಿದ್ಯಾರ್ಥಿಯು ಅವರ ಹಿಂದಿನ ವರ್ಷದ ಪರೀಕ್ಷೆಗಳಲ್ಲಿ ಯಾವುದೇ ಬ್ಯಾಕ್‌ಲ್ಯಾಗ್ ಇರಬಾರದು.<br>6. ಬಿ.ಬಿ.ಎಂ.ಪಿ, ಕಾರ್ಪೋರೇಷನ್, ಟೌನ್ ಮುನ್ಸಿಪಲ್ ಹಾಗೂ ಪಟ್ಟಣ ಪ್ರದೇಶದಲ್ಲಿ ನಿವಾಸಿಯಾದ ವಿದ್ಯಾರ್ಥಿಗಳು ಈ ಸೌಲಭ್ಯಕ್ಕೆ ಅರ್ಹರಾಗಿರುವುದಿಲ್ಲ.<br>7. ನಿಲಯಗಳು/ಪಿ.ಜಿ ಹೌಸಸ್ ಅಥವಾ ಬಾಡಿಗೆ ಮನೆಗಳಲ್ಲಿ ವಾಸವಿರುವ ವಿದ್ಯಾರ್ಥಿಗಳು ಈ ಸೌಲಭ್ಯಕ್ಕ ಅರ್ಹರಾಗಿರುತ್ತಾರೆ.<br>8. ಆಯ್ಕೆಯಾದ ವಿದ್ಯಾರ್ಥಿಗಳಿಗೆ ಮಾಸಿಕ 1500 ಗಳಂತೆ 10 ತಿಂಗಳಿಗೆ ಗರಿಷ್ಠ 15,000 ರೂ ಗಳನ್ನು ಅವರ ವಿದ್ಯಾಭ್ಯಾಸದ ಅವಧಿಯಲ್ಲಿ ನೀಡಲಾಗುವುದು. |

<table>
<tr><td colspan="3">ಕ್ರಿಶ್ಚಿಯನ್ ಸಮುದಾಯದ ಅಭಿವೃದ್ಧಿ</td></tr>
<tr><td>18</td><td>(ಅ) ಕರ್ನಾಟಕದಲ್ಲಿ ಚರ್ಚ್‌ಗಳ ದುರಸ್ತಿ ಮತ್ತು ಜೀರ್ಣೋದ್ಧಾರಕ್ಕಾಗಿ ಸಹಾಯಾನುದಾನ:-</td><td>ಚರ್ಚುಗಳ ದುರಸ್ತಿ ಮತ್ತು ನವೀಕರಣಕ್ಕಾಗಿ ಅನುದಾನವನ್ನು ಚರ್ಚುಗಳ ಕಟ್ಟಡ ನಿರ್ಮಾಣದ ವರ್ಷಗಳಿಗನುಸಾರವಾಗಿ ಕೆಳಕಂಡಂತೆ ಬಿಡುಗಡೆ ಮಾಡಲಾಗುವುದು"<br><br>
<table>
<tr><th>ಕ್ರ.ಸಂ</th><th>ವಿಷಯ</th><th>ಬಿಡುಗಡೆ ಮಾಡಬಹುದಾದ ಅನುದಾನ</th></tr>
<tr><td>1</td><td>100 ವರ್ಷ ಮೇಲ್ಪಟ್ಟು</td><td>ರೂ. 50 ಲಕ್ಷ ಅಥವಾ ಅಂದಾಜು ವೆಚ್ಚದ ಶೇ. 90 ಪ್ರತಿಶತ ಯಾವುದು ಕಡಿಮೆಯೋ ಆ ಮೊತ್ತ</td></tr>
<tr><td>2</td><td>76–100 ವರ್ಷ</td><td>ರೂ. 40 ಲಕ್ಷ ಅಥವಾ ಅಂದಾಜು ವೆಚ್ಚದ ಶೇ. 60 ಪ್ರತಿಶತ ಯಾವುದು ಕಡಿಮೆಯೋ ಆ ಮೊತ್ತ</td></tr>
<tr><td>3</td><td>51–75 ವರ್ಷ</td><td>ರೂ. 30 ಲಕ್ಷ ಅಥವಾ ಅಂದಾಜು ವೆಚ್ಚದ ಶೇ. 50 ಪ್ರತಿಶತ ಯಾವುದು ಕಡಿಮೆಯೋ ಆ ಮೊತ್ತ</td></tr>
<tr><td>4</td><td>26–50 ವರ್ಷ</td><td>ರೂ. 25 ಲಕ್ಷ ಅಥವಾ ಅಂದಾಜು ವೆಚ್ಚದ ಶೇ. 40 ಪ್ರತಿಶತ ಯಾವುದು ಕಡಿಮೆಯೋ ಆ ಮೊತ್ತ</td></tr>
<tr><td>5</td><td>11–25 ವರ್ಷ</td><td>ರೂ. 10 ಲಕ್ಷ</td></tr>
<tr><td>6</td><td>1 ರಿಂದ 10 ವರ್ಷ</td><td>ಯಾವುದೇ ಅನುದಾನ ಇಲ್ಲ</td></tr>
</table>
ಅನುದಾನದ ಸಾಮಾನ್ಯ ಷರತ್ತುಗಳು:-<br><br>
1.ಯಾವ ಸಂಸ್ಥೆಯ ಪರವಾಗಿ ಸಹಾಯಾನುದಾವನ್ನು ಕೋರಲಾಗಿದೆಯೋ ಅಂಥ ಪ್ರತಿಯೊಂದು ಸಂಸ್ಥೆಯು ವ್ಯವಸ್ಥಾಪಕ ಸಮಿತಿಯ ನಿಯಂತ್ರಣದಲ್ಲಿರತಕ್ಕದ್ದು ಮತ್ತು ವ್ಯವಸ್ಥಾಪಕ ಸಮಿತಿಯು ಸಂಸ್ಥೆಯ ನಿರ್ವಹಣೆಗೆ ಹಾಗೂ ಕಾಲಕಾಲಕ್ಕೆ ನಿಯಮಿಸಬಹುದಾದಂಥ ಸಹಾಯಾನುದಾನದ ಎಲ್ಲ ಷರತ್ತುಗಳನ್ನು ಯುಕ್ತವಾಗಿ ಪೂರೈಸುವ ಜವಾಬ್ದಾರಿ ಹೊಂದಿರತಕ್ಕದ್ದು.</td></tr>
<tr><td>19</td><td>(ಆ) ಕ್ರಿಶ್ಚಿಯನ್ ಸಮುದಾಯದ ಸ್ಮಶಾನಗಳಿಗೆ ಆವರಣಗೋಡೆ ನಿರ್ಮಾಣ ಮತ್ತು ಮೂಲಭೂತ ಸೌಕರ್ಯಗಳನ್ನು ಒದಗಿಸಲು ಸಹಾಯಾನುಧನ:-</td><td>ಕ್ರಿಶ್ಚಿಯನ್ ಸಮುದಾಯ ಸ್ಮಶಾನಗಳಿಗೆ ಆವರಣ ಗೋಡೆ ನಿರ್ಮಾಣ ಮತ್ತು ಈ ಸ್ಮಶಾನಗಳಿಗೆ ಮೂಲಭೂತ ಸೌಕರ್ಯಗಳಾದ ವಿದ್ಯುದೀಕರಣ, ಶುದ್ಧ ಕುಡಿಯುವ ನೀರಿನ ಹಾಗೂ ಕೊಳವೆ ಬಾವಿ ಸೌಕರ್ಯ, ಶವ ಇಡುವ ಕಟ್ಟಡ ರಸ್ತೆ, ಇತ್ಯಾದಿಗಳಿಗೆ ಅಂದಾಜು ವೆಚ್ಚದ ಶೇ 90% ರಷ್ಟು ಅಥವಾ ಗರಿಷ್ಠ ರೂ. 25.00 ಲಕ್ಷ ಯಾವುದು ಕಡಿಮೆಯೋ ಅದರಂತೆ ಕ್ರಿಶ್ಚಿಯನ್ ಸಂಸ್ಥೆಗಳಿಗೆ ಅನುದಾನ ಮಂಜೂರು ಮಾಡಲಾಗುವುದು.<br><br>ಕ್ರಿಶ್ಚಿಯನ್ ಸಮುದಾಯದ ಸ್ಮಶಾನಗಳಿಗೆ ಆವರಣ ಗೋಡೆ ನಿರ್ಮಾಣ ಮತ್ತು ಈ ಸ್ಮಶಾನಗಳಿಗೆ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ ಸಂಬಂಧಪಟ್ಟ ಮುಖ್ಯಸ್ಥರು ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾ ಅಧಿಕಾರಿಗಳು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ರವರಿಗೆ ಮಾರ್ಗಸೂಚಿಗಳನ್ವಯ ನಿಗದಿತ ದಾಖಲಾತಿಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸುವುದು.</td></tr>
</table>

| | | |
|---|---|---|
| 20 | **(ಇ) ಅಲ್ಪಸಂಖ್ಯಾತರಿಗೆ ಅನಾಥಾಶ್ರಮ ಮತ್ತು ವೃದ್ಧಾಶ್ರಮಗಳಿಗೆ ಸಹಾಯಾನುದಾನ:-** | ಯಾವ ಸಂಸ್ಥೆಯ ಪರವಾಗಿ ಸಹಾಯಾನುದಾನವನ್ನು ಕೋರಲಾಗಿದೆಯೋ ಅಂಥ ಪ್ರತಿಯೊಂದು ಸಂಸ್ಥೆಯು ವ್ಯವಸ್ಥಾಪಕ ಸಮಿತಿಯ ನಿಯಂತ್ರಣದಲ್ಲಿರತಕ್ಕದ್ದು ಮತ್ತು ವ್ಯವಸ್ಥಾಪಕ ಸಮಿತಿಯು ಸಂಸ್ಥೆಯ ನಿರ್ವಹಣೆ ಹಾಗೂ ಕಾಲ ಕಾಲಕ್ಕೆನಿಯಮಿಸಬಹುದಾದಂತೆ ಸಹಾಯಾನುದಾನದ ಎಲ್ಲ ಷರತ್ತುಗಳನ್ನು ಯುಕ್ತವಾಗಿ ಪೂರೈಸುವ ಜವಾಬ್ದಾರಿ ಹೊಂದಿತಕ್ಕದ್ದು.<br>**ಅನುದಾನಕ್ಕಾಗಿ ಮತ್ತು ಅದರ ಬಳಕೆಗೆ ಸಂಬಂಧಿಸಿದ ಪ್ರಕ್ರಿಯೆ ಹಾಗೂ ಇತರೆ ಷರತ್ತುಗಳು:-**<br>1) ಈ ಯೋಜನೆಯನ್ನು ಅಲ್ಪಸಂಖ್ಯಾತರ ಅಲ್ಪಸಂಖ್ಯಾತ ಸಮುದಾಯದ ಸ್ವಯಂ ಸೇವಾ ಸಂಸ್ಥೆಗಳ ಮುಖಾಂತರ ಜಾರಿಗೆ ತರಲಾಗುವುದು. ರಾಜ್ಯ ಸರ್ಕಾರವು ನಿರ್ದೇಶಕರು, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ, ಬೆಂಗಳೂರು ರವರ ಮುಖಾಂತರ ಬಂದ ಅನುದಾನದ ಅರ್ಜಿಗಳನ್ನು ಮಾತ್ರ ಪರಿಗಣಿಸುವುದು.<br>2) ವೃದ್ಧಾಶ್ರಮಕ್ಕೆ ತಗಲುವ ಅನುಮೋದಿತ ಒಟ್ಟು ವೆಚ್ಚದಲ್ಲಿ ರಾಜ್ಯ ಸರ್ಕಾರದ ಪಾಲು ಶೇ. 90 ರಷ್ಟಾಗಿದ್ದು, ಉಳಿದ ಶೇ. 10ರಷ್ಟು ಅನುಮೋದಿತ ವೆಚ್ಚವನ್ನು ಅಲ್ಪಸಂಖ್ಯಾತ ಸಮುದಾಯದ ಸ್ವಯಂ ಸೇವಾ ಸಂಸ್ಥೆಯು ತನ್ನ ಸ್ವಂತ ಸಂಪನ್ಮೂಲಗಳಿಂದ ಭರಿಸತಕ್ಕದ್ದು.<br>3) ಅಲ್ಪಸಂಖ್ಯಾತ ಸಮುದಾಯದ ಸ್ವಯಂ ಸೇವಾ ಸಂಸ್ಥೆಯು ಅಸ್ತಿತ್ವಕ್ಕೆ ಬಂದು ಕನಿಷ್ಠ ಎರಡು ವರ್ಷಗಳಾಗಿರಬೇಕು.<br>4) ಅಲ್ಪಸಂಖ್ಯಾತ ಸಮುದಾಯದ ಸ್ವಯಂ ಸೇವಾ ಸಂಸ್ಥೆಯು ಸಾಕಷ್ಟು ಸಿಬ್ಬಂದಿ ವರ್ಗದೊಂದಿಗೆ ಅಗತ್ಯವಾದ ಸೌಲಭ್ಯ, ಸಂಪನ್ಮೂಲ ಹಾಗೂ ಅನುಭವ ಹಾಗೂ ಆರ್ಥಿಕವಾಗಿ ಸುಸ್ಥಿತಿಯುಳ್ಳ ಆಡಳಿತ ವರ್ಗವನ್ನು ಹೊಂದಿರಬೇಕು.<br>5) ಅಲ್ಪಸಂಖ್ಯಾತ ಸಮುದಾಯದ ಸ್ವಯಂ ಸೇವಾ ಸಂಸ್ಥೆಯು ಯಾವುದೇ ಓರ್ವ ವ್ಯಕ್ತಿಯ ಅಥವಾ ಒಂದು ಜನಾಂಗದ ಲಾಭಕ್ಕಾಗಿ ನಡೆಯುತ್ತಿರಬಾರದು.<br>6) ಅಲ್ಪಸಂಖ್ಯಾತ ಸಮುದಾಯದ ಸ್ವಯಂ ಸೇವಾ ಸಂಸ್ಥೆಯು ಅಧಿಕೃತವಾಗಿ ರಚಿತವಾಗಿ ಆಡಳಿತ ಮಂಡಳಿಯನ್ನು ಹೊಂದಿದ್ದು, ಆಡಳಿತ ವರ್ಗದ ಅಧಿಕಾರ, ಕರ್ತವ್ಯಗಳು ಮತ್ತು ಜವಾಬ್ದಾರಿಗಳನ್ನು ಸ್ಪಷ್ಟ ಹಾಗೂ ಖಚಿತವಾಗಿ ಸಂಸ್ಥೆಯ ಬರವಣಿಗೆಯಲ್ಲಿರುವ ಸಂವಿಧಾನದಲ್ಲಿ ವಿರೂಪಿತವಾಗಿರಬೇಕು.<br>7) ಅಲ್ಪಸಂಖ್ಯಾತ ಸಮುದಾಯದ ಸ್ವಯಂ ಸೇವಾ ಸಂಸ್ಥೆಯ ಸೇವೆಗಳು ಯಾವುದೇ ಜಾತಿ ಪಂಥ, ಮತ ಮತ್ತು ಭಾಷೆಗಳನ್ನು ಪರಿಗಣಿಸದೇ ಎಲ್ಲರಿಗೂ ವರ್ಷದ ಎಲ್ಲಾ ಕಾಲದಲ್ಲಿ ಲಭ್ಯವಿರಬೇಕು. |
| 21 | (ಈ)ಕ್ರಿಶ್ಚಿಯನ್ ಸಮುದಾಯ ಭವನ ಕಟ್ಟಡ ನಿರ್ಮಾಣ:- | ಸಮುದಾಯ ಭವನ ಯೋಜನೆಯಡಿಯಲ್ಲಿ ರಾಜ್ಯದ ಮತೀಯ ಅಲ್ಪಸಂಖ್ಯಾತರಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧರು ಮತ್ತು ಸಿಖ್ ಜನಾಂಗದವರು ಸಾಮಾಜಿಕ ಮತ್ತು ಸಾಂಸ್ಕೃತಿಕ ಚಟುವಟಿಕೆಗಳಿಗಾಗಿ ಉತ್ತೇಜನ ನೀಡಲು ಸದರಿ ಸಮುದಾಯಗಳಿಗೆ ಸೇರಿದ ನೊಂದಾಯಿತ ಸರ್ಕಾರಿ ಸ್ವಾಮ್ಯದ ಬೋರ್ಡು ಮತ್ತು ಕಾರ್ಪೋರೇಷನ್‌ಗಳು/ಖಾಸಗಿ ಸಂಘ ಸಂಸ್ಥೆಗಳು /ಟ್ರಸ್ಟ್‌ಗಳಿಗೆ ಶಾದಿಮಹಲ್ /ಸಮುದಾಯ ಭವನಗಳ ನಿರ್ಮಾಣಕ್ಕೆ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಅನುದಾನದ ಗರಿಷ್ಠ ಮಿತಿಯನ್ನು ಜಿಲ್ಲಾ ಕೇಂದ್ರ ಸ್ಥಾನಗಳಲ್ಲಿ ರೂ. 1.00 ಕೋಟಿ ಮತ್ತು ಇತರೆ ಸ್ಥಳಗಳಲ್ಲಿ ರೂ. 50.00 ಲಕ್ಷಗಳಿಗೆ ಮೀರದಂತೆ ಅನುದಾನ ಮಂಜೂರು ಮಾಡಲಾಗುವುದು.<br>**ಷರತ್ತುಗಳು:-**<br>1) ಈ ಯೋಜನೆಯಡಿಯಲ್ಲಿ ಅನುದಾನ ಪಡೆಯಲು ನೋಂದಾಯಿತ ಮತೀಯ ಅಲ್ಪಸಂಖ್ಯಾತರ ಸರ್ಕಾರಿ ಸ್ವಾಮ್ಯದ ಬೋರ್ಡು ಮತ್ತು ಕಾರ್ಪೋರೇಷನ್‌ಗಳು/ಖಾಸಗಿ ಸಂಘ, ಸ್ವಯಂ ಸೇವಾ ಸಂಸ್ಥೆಗಳು/ಟ್ರಸ್ಟ್‌ಗಳು ಮಾತ್ರ ಅರ್ಹರಿರುತ್ತಾರೆ.<br>2) ಅನುದಾನ ಪಡೆಯುವ ಸರ್ಕಾರಿ ಸ್ವಾಮ್ಯದ ಬೋರ್ಡ್ ಕಾರ್ಪೋರೇಷನ್ /ಖಾಸಗಿ ಸಂಘ, ಸ್ವಯಂಸೇವಾ ಸಂಸ್ಥೆಗಳು/ಟ್ರಸ್ಟ್‌ಗಳು ರಾಜ್ಯದಲ್ಲಿನ |

| | | |
|---|---|---|
| | | ಕರ್ನಾಟಕ ಸಂಘಗಳ ನೋಂದಾಣಿ ಕಾಯ್ದೆ 1960 ಅಥವಾ ಟ್ರಸ್ಟ್ ಕಾಯ್ದೆಯನ್ವಯ ಅಥವಾ ಇತರ ಸಂಬಂಧಪಟ್ಟ ಕಾಯ್ದೆಯಡಿಯಲ್ಲಿನೋಂದಣಿಯಾಗಿ ಕನಿಷ್ಠ ಮೂರು ವರ್ಷವಾಗಿರಬೇಕು. |
| | (ಈ)ಕ್ರಿಶ್ಚಿಯನ್ ಸಮುದಾಯ ಭವನ ಕಟ್ಟಡ ನಿರ್ಮಾಣ:- | 3) ಅನುದಾನ ಬಯಸುವ ಸ್ವಯಂಸೇವಾ ಸಂಸ್ಥೆಗಳು/ಟ್ರಸ್ಟ್‌ಗಳು ಸಂಘಗಳು ಕಳೆದ ವರ್ಷದ ಆಡಿಟ್ ವರದಿಗಳನ್ನು ಚಾರ್ಟೆಡ್ ಆಕೌಂಟಂಟ್‌ರವರಿಂದ ಆಡಿಟ್ ಮಾಡಿಸಿ ಸಲ್ಲಿಸಬೇಕು.<br>4) ಉದ್ದೇಶಿತ ಸಮುದಾಯ ಭವನ ಕಟ್ಟಡದ ನಿವೇಶನವು ಸಂಸ್ಥೆ, ಸಂಘ/ಟ್ರಸ್ಟ್‌ನ್ನು ಕಡ್ಡಾಯವಾಗಿ ಸಂಸ್ಥೆಯ ಹೆಸರಿನಲ್ಲಿರಬೇಕು. ಭೂ ಪರಿವರ್ತನೆಯಾಗಿದ್ದಲ್ಲಿ ನಿವೇಶನವು ವಾಣಿಜ್ಯ ಉದ್ದೇಶಕ್ಕೆ ಪರಿವರ್ತಿತ ವಾಗಿರಬೇಕು.<br>5) ಉದ್ದೇಶಿತ ಕಟ್ಟಡಕ್ಕೆ ಸ್ವಂತ ನಿವೇಶನ ಇರತಕ್ಕದ್ದು ಅಥವಾ 30 ವರ್ಷಗಳಿಗಿಂತ ಕಡಿಮೆ ಇಲ್ಲದ ಅವಧಿಗೆ ಗುತ್ತಿಗೆ ಅಥವಾ ಲೀಸ್ ಪಡೆದಿರುವ ನಿವೇಶನ ಇರತಕ್ಕದ್ದು.<br>6) ಜಿಲ್ಲಾ ಕೇಂದ್ರ ಸ್ಥಾನಗಳಲ್ಲಿ ಸಮುದಾಯಭವನಗಳ ನಿರ್ಮಾಣದ ಅಂದಾಜಿನ ಮೊತ್ತದ ಶೇ. 50% ರಷ್ಟು ಗರಿಷ್ಠ ರೂ. 1.00 ಕೋಟಿಗಳ ವರೆಗೆ ಅನುದಾನ ನೀಡಲಾಗುವುದು. ಯಾವುದೇ ಪ್ರಕರಣದಲ್ಲಿ ರೂ. 1.00 ಕೋಟಿಗಿಂತ ಹೆಚ್ಚಾಗಿ ಸರ್ಕಾರಿ ಅನುದಾನ ನೀಡಲಾಗುವುದಿಲ್ಲ.<br>7) ಜಿಲ್ಲಾ ಕೇಂದ್ರ ಸ್ಥಾನಗಳನ್ನು ಹೊರತುಪಡಿಸಿ ಇತರೆ ಸ್ಥಳಗಳಲ್ಲಿ ಸಮುದಾಯ ಭವನಗಳ ಅಂದಾಜಿನ ಮೊತ್ತವು ರೂ. 50.00 ಲಕ್ಷಗಳಿಗಿಂತ ಜಾಸ್ತಿ ಇದ್ದಲ್ಲಿ ಗರಿಷ್ಠ ರೂ. 50.00 ಲಕ್ಷಗಳನ್ನು ರೂ. 50.00 ಲಕ್ಷಗಳಿಗಿಂತ ಕಡಿಮೆ ಇದ್ದಲ್ಲಿ ಅಂದಾಜು ಮೊತ್ತದಷ್ಟು ಅನುದಾನವನ್ನು ಮಂಜೂರು ಮಾಡತಕ್ಕದ್ದು.<br>8) ಸಮುದಾಯಭವನವು ಅಗತ್ಯ ಮೂಲಭೂತ ಸೌಲಭ್ಯಗಳಾದ ನೀರು, ಶೌಚಾಲಯ, ವಿದ್ಯುತ್‌ಚ್ಛಕ್ತಿ, ಪಾರ್ಕಿಂಗ್ ಸೌಲಭ್ಯ ಅಗತ್ಯ ಕೊಠಡಿಗಳು, ಸ್ಥಾನದ ಕೊಠಡಿಗಳು, ಲಾಕರ್‌ಗಳು ಸೌಲಭ್ಯ ಅಡುಗೆ ಸಾಮಗ್ರಿಗಳು ಹಾಗೂ ಉತ್ತಮ ಪರಿಸರವನ್ನು ಹೊಂದಿತಕ್ಕದ್ದು.<br>9) ಟ್ರಸ್ಟ್‌ನ ಸದಸ್ಯರು ಬೇರೆ ಬೇರೆ ಕುಟುಂಬಗಳಿಗೆ ಸೇರಿಸತಕ್ಕದ್ದು.<br>10) ಕಟ್ಟಡದ ನಕ್ಷೆಗೆ ಸ್ಥಳೀಯ, ನಗರಸಭೆ, ಪುರಸಭೆ, ಪಂಚಾಯ್ತಿಗಳಿಂದ ಅನುಮೋದನೆ ಹಾಗೂ ಪರವಾನೆ ಪಡೆದಿರಬೇಕು. ಕಟ್ಟಡದ ನಿರ್ಮಾಣ ಮೊತ್ತದ ಅಂದಾಜು ಪಟ್ಟಿಯನ್ನು ಸರ್ಕಾರಿ ಸಂಸ್ಥೆಗಳಲ್ಲಿನ /ಅನುಮೋದಿತ ಕಾರ್ಯಪಾಲಕ /ಸಹಾಯಕ ಕಾರ್ಯಪಾಲಕ ಅಭಿಯಂತರರಿಂದ ಧೃಢೀಕರಣ ಮಾಡಿ ಸಲ್ಲಿಸತಕ್ಕದ್ದು.<br>11) ಜಿಲ್ಲಾ ಕೇಂದ್ರಗಳಲ್ಲಿ 500 ಜನರು ಒಟ್ಟಿಗೆ ಕೊರುವಂತಹ ಹಾಲ್‌ಗಳನ್ನು ಹಾಗೂ ಇತರೆ ಸ್ಥಳಗಳಲ್ಲಿ 200 ಜನರು ಒಟ್ಟಿಗೆ ಕೂರುವಂತಹ ಹಾಲ್‌ಗಳನ್ನು ಹೊಂದಿರತಕ್ಕದ್ದು.<br>12) ಸಮುದಾಯಭವನಗಳನ್ನು ವಾಣಿಜ್ಯ ಮತ್ತು ವಾಣಿಜ್ಯೇತರ ಉದ್ದೇಶಗಳಿಗೆ ಉಪಯೋಗಿಸಿಕೊಳ್ಳಬಹುದು.<br>13) ವಾಣಿಜ್ಯೆತರ ಉದ್ದೇಶಕ್ಕೆ ಹಾಗೂ ಇತರೆ ಸಾಮಾಜಿಕ ಸಮಾರಂಭಗಳಿಗೆ ಸಮಂಜಸವಾದ ಬಾಡಿಗೆಯನ್ನು ಸಂಬಂಧಪಟ್ಟ ಅಲ್ಪಸಂಖ್ಯಾತರ ಇಲಾಖೆಯ ಜಿಲ್ಲಾ ಅಧಿಕಾರಿಯವರೊಂದಿಗೆ ಸಮಾಲೋಚಿಸಿ ನಿಗದಿಪಡಿಸತಕ್ಕದ್ದು. ಇದನ್ನು ಆಯಾ ಜಿಲ್ಲಾಧಿಕಾರಿಯವರಿಂದ ಅನುಮೋದಿಸಿಕೊಳ್ಳತಕ್ಕದ್ದು.<br>14) ಮದುವೆ ಸಮಾರಂಭಗಳಿಗೆ ಹಾಗೂ ಇತರೆ ಸಮಾರಂಭಗಳಿಗೂ ಸಹ ಬಾಡಿಗೆ ದರಗಳನ್ನು ನಿಗದಿಪಡಿಸಲು ಜಿಲ್ಲಾಧಿಕಾರಿಗಳ ಅನುಮೋದನೆ ಪಡೆದುಕೊಳ್ಳತಕ್ಕದ್ದು. |

| | | |
|---|---|---|
| | | **ಜೈನ್, ಬೌದ್ಧ ಮತ್ತು ಸಿಖ್ ಸಮುದಾಯದ ಅಭಿವೃದ್ಧಿ** |
| 22 | **ಜೈನ್, ಬೌದ್ಧ ಮತ್ತು ಸಿಖ್ ದೇವಾಲಯ (ಬಸದಿ)ಗಳ ನವೀಕರಣ ದುರಸ್ಥಿ/ ಜೀರ್ಣೋದಾರಕ್ಕಾಗಿ ಅನುದಾನ ಬಿಡುಗಡೆ:-** | ಜೈನ್, ಬೌದ್ದ ಮತ್ತು ಸಿಖ್ ಸಮುದಾಯದ ಅಭಿವೃದ್ದಿ ಯೋಜನೆಯಡಿಯಲ್ಲಿ ಕರ್ನಾಟಕ ರಾಜ್ಯದಲ್ಲಿರುವ ಜೈನ್, ಬೌದ್ದ ಮತ್ತು ಸಿಖ ದೇವಾಲಯ (ಬಸದಿ)ಗಳ ನವೀಕರಣ ದುರಸ್ಥಿ/ ಜೀರ್ಣೋಧಾರಕ್ಕಾಗಿ ಧಾರ್ಮಿಕ ಸ್ವತ್ತುಗಳ ಸಂರಕ್ಷಣೆಗಾಗಿ ಮತ್ತು ಉತ್ತಮ ಸ್ಥಿತಿಯಲ್ಲಿ ಕಾಪಾಡಲು ಈ ಯೋಜನೆಯನ್ನು ಜಾರಿಗೊಳಿಸಲಾಗಿದೆ. ಪ್ರತಿ ಜೈನ್, ಬೌದ್ದ ಮತ್ತು ಸಿಖ್ ದೇವಾಲಯ (ಬಸದಿ)ಗಳಿಗೆ ಅಂದಾಜು ವೆಚ್ಚದ ಶೇ.50%ರಷ್ಟು ಅಥವಾ ರೂ.10.00 ಲಕ್ಷ ನೀಡಲಾಗುವುದು.<br>**ಅರ್ಹತೆಗಳು:-**<br>1) ನಿಗಧಿತ ನಮೂನೆಯಲ್ಲಿ ಅರ್ಜಿ<br>2) ದೇವಾಲಯ/ಸಂಸ್ಥೆಯ ನೊಂದಣಿ ಪ್ರಮಾಣ ಪತ್ರ (ಭಾರತೀಯ ನ್ಯಾಸ ಅಧಿನಿಯಮ ಅಥವಾ ಕರ್ನಾಟಕ ಸಂಘ ಸಂಸ್ಥೆಗಳ ನೊಂದಣಿ ಅಧಿನಿಯಮದ ಮೇರೆಗೆ ನೊಂದಾವಣೆಯಾಗಿರಬೇಕು ಅಥವಾ ಸಂಬಂಧಪಟ್ಟ ತಾಲ್ಲೂಕಿನ ತಹಸಿಲ್ದಾರರಿಂದ ದೇವಾಲಯ/ಬಸದಿ ಇರುವ ಬಗ್ಗೆ ಪ್ರಮಾಣ ಪತ್ರ ಸಲ್ಲಿಸಬೇಕು<br>3) ಒಂದು ವರ್ಷದ ಆಡಿಟ್ ರಿಪೋರ್ಟ್ (ಚಾರೆಟ್ಡ್ ಅಕೌಂಟೆಂಟ್ ರಿಂದ ತಯಾರಿಸಿರಬೇಕು) ವಾರ್ಷಿಕ ಲೆಕ್ಕ ಪತ್ರ ವರದಿ.<br>4) ಅಂದಾಜು ಪಟ್ಟಿ. (ದೇವಸ್ಥಾನದ ವ್ಯಾಪ್ತಿಗೆ ಬರುವ ಸ್ಥಳೀಯ ಸರ್ಕಾರಿ ಅಭಿಯಂತರರು ಅಥವಾ ಇತರೆ ಅನುಮೋದಿತ ಅಭಿಯಂತರರು).<br>5) ದೇವಾಲಯ/ವ್ಯವಸ್ಥಾಪನಾ ಸಮಿತಿ ಹೆಸರಿನಲ್ಲಿ ನಿವೇಶನ ಪತ್ರ.<br>6) ದೇವಾಲಯ ಆಡಳಿತಕ್ಕೆ ವಿದ್ಯುಕ್ತವಾಗಿ ಚುನಾಯಿತಗೊಂಡ ಆಡಳಿತ ಮಂಡಳಿ ಪಟ್ಟಿ.<br>7) ಜಿಲ್ಲಾ ಅಧಿಕಾರಿಗಳು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ ರವರ ಸ್ಥಳ ತನಿಖಾ ವರದಿ.<br>8) ದೇವಾಲಯದ ಛಾಯಾ ಚಿತ್ರಗಳನ್ನು ಹಿಂಬದಿಯಲ್ಲಿ ಜಿಲ್ಲಾ ಅಧಿಕಾರಿಗಳು ದೃಢೀಕರಿಸಿರಬೇಕು<br>9) ಮುಚ್ಚಳಿಕೆ ಪತ್ರ<br>10) ಈ ಯೋಜನೆಯಡಿ ಅನುದಾನ ಪಡೆಯುವ ದೇವಾಲಯ/ ಬಸದಿ ಮುಜಾರಾಯಿ ಇಲಾಖೆಯಿಂದ ಇದೇ ಉದ್ದೇಶಕ್ಕೆ ಅನುದಾನ ಪಡೆಲಾಗಿದೆಯೇ/ ಇಲ್ಲವೇ ಎಂಬ ಬಗ್ಗೆ ಸ್ಥಳೀಯ ತಹಸಿಲ್ದಾರ ಕಛೇರಿಯಿಂದ ದೃಢೀಕರಣ ಪಡಿದು ಸಲ್ಲಿಸುವುದು. |
| | | **ಮದರಸಾದಲ್ಲಿ ಉತ್ತಮ ಗುಣಮಟ್ಟದ ಶಿಕ್ಷಣವನ್ನು ಒದಗಿಸುವುದು.** |
| 23 | **ಮದರಸಾದಲ್ಲಿ ಉತ್ತಮ ಗುಣಮಟ್ಟದ ಶಿಕ್ಷಣವನ್ನು ಒದಗಿಸುವುದು:-** | ಕರ್ನಾಟಕ ರಾಜ್ಯದಲ್ಲಿ ನಡೆಸಲಾಗುತ್ತಿರುವ ಮುಸ್ಲಿಂ ಸಮುದಾಯದ ವಕ್ಫ್ ನೊಂದಾಯಿತ ಮದರಸಗಳನ್ನು ಆಧುನೀಕರಣಗೊಳಿಸಲು ಹಾಗೂ ಈ ಮದರಸಗಳಿಗೆ ಮೂಲಸೌಕರ್ಯವನ್ನು ಕಲ್ಪಿಸಲು ಮತ್ತು ಈ ಮದರಸಗಳಲ್ಲಿ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳಿಗೆ ಔಪಚಾರಿಕ ಹಾಗೂ ಗಣಕೀಕೃತ ಶಿಕ್ಷಣವನ್ನು ನೀಡಲು ಈ ಯೋಜನೆಗೆ ಪ್ರತಿ ಸಂಸ್ಥೆಗೆ ಗರಿಷ್ಠ ರೂ. 10.00 ಲಕ್ಷಗಳನ್ನು ಮಂಜೂರಾತಿ ನೀಡಿ ಆದೇಶಿಸಿದೆ. |

| | | |
|---|---|---|
| ಅಲ್ಪಸಂಖ್ಯಾತರಿಗೆ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ | | |
| 24 | **(ಅ)ಐ.ಎ.ಎಸ್, ಕೆ.ಎ.ಎಸ್, ಸಿ.ಇ.ಟಿ/ನೀಟ್ ಪೋಲಿಸ್ ನೇಮಕಾತಿ, ಬ್ಯಾಂಕ್ ಅಧಿಕಾರಿಗಳ ಹುದ್ದೆಗೆ ತರಬೇತಿ** | ಕೇಂದ್ರ ಮತ್ತು ಕರ್ನಾಟಕ ಲೋಕಸೇವಾ ಆಯೋಗಗಳು ಹಾಗೂ ಇತರೆ ನೇಮಕಾತಿ ಪ್ರಾಧಿಕಾರಿಗಳು ನಡೆಸುವ ಪರೀಕ್ಷೆಗಳನ್ನು ಗಮನದಲ್ಲಿಟ್ಟುಕೊಂಡು ರಾಜ್ಯ ಸರ್ಕಾರವು ಅಲ್ಪಸಂಖ್ಯಾತರ ಅಭ್ಯರ್ಥಿಗಳಿಗೆ ಪೋಲಿಸ್ ಇಲಾಖೆಯ (ಸಿ) ವರ್ಗದ ಮತ್ತು ಬ್ಯಾಂಕ್ ಅಧಿಕಾರಿಗಳ ಹುದ್ದೆಗಳಿಗೆ ಪ್ರತಿಷ್ಠಿತ ಖಾಸಗಿ ಸಂಸ್ಥೆಗಳ ಮೂಲಕ ಪರೀಕ್ಷಾ ಪೂರ್ವ ತರಬೇತಿ ನೀಡಲಾಗುವುದು ಹಾಗೂ ದ್ವಿತೀಯ ಪಿಯುಸಿ ಓದುತ್ತಿರುವ ವಿದ್ಯಾರ್ಥಿಗಳಿಗೆ ವಿವಿಧ ಸಂಸ್ಥೆಗಳಿಂದ ಸಿ.ಇ.ಟಿ ತರಬೇತಿ ನೀಡಲಾಗುವುದು.<br>**ಷರತ್ತುಗಳು:**<br>1. ಪ್ರವರ್ಗ–1ಕ್ಕೆ ಸೇರಿರುವ ಅಲ್ಪಸಂಖ್ಯಾತರ ಅಭ್ಯರ್ಥಿಗಳ ವಾರ್ಷಿಕ ವರಮಾನವು 4.50 ಲಕ್ಷಕ್ಕೆ ಮೀರಿರಬಾರದು ಹಾಗೂ ಇತರೆ ಪ್ರವರ್ಗದ ಅಭ್ಯರ್ಥಿಯ ಕುಟುಂಬದ ವಾರ್ಷಿಕ ವರಮಾನವು 3.50 ಲಕ್ಷ ಮೀರಿರಬಾರದು.<br>2. ಅಭ್ಯರ್ಥಿಗಳ ವಯೋಮಿತಿಯು ಕನಿಷ್ಠ 21 ವರ್ಷಗಳಾಗಿದ್ದು ಗರಿಷ್ಠ ವಯೋಮಿತಿಯು ಪ್ರಾಧಿಕಾರ ನಿಗದಿಪಡಿಸುವಂತೆ ಇರಬೇಕು.<br>3. ತರಬೇತಿಗೆ ಆಯ್ಕೆಯಾದ ಅಭ್ಯರ್ಥಿಗಳ ತರಬೇತಿ ಶುಲ್ಕ ಮತ್ತು ಮಾಸಿಕ ಶಿಷ್ಯವೇತನವನ್ನು ಇಲಾಖೆಯಿಂದ ನೀಡಲಾಗುವುದು.<br>4. ಕೇಂದ್ರ ಲೋಕಸೇವಾ ಆಯೋಗವು ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ದೆಹಲಿಯಲ್ಲಿ ಪರೀಕ್ಷಾ ಪೂರ್ವ ತರಬೇತಿ ಪಡೆಯುವ ಅಭ್ಯರ್ಥಿಗಳಿಗೆ ಮಾಸಿಕ ರೂ. 13,000/– ಬೆಂಗಳೂರು ಪಟ್ಟಣದ ತರಬೇತಿ ಕೇಂದ್ರಗಳಲ್ಲಿ ತರಬೇತಿ ಪಡೆಯುತ್ತಿರುವ ಅಭ್ಯರ್ಥಿಗಳಿಗೆ ಮಾಹೆಯಾನ 6000 ರಂತೆ 7 ತಿಂಗಳ ಅವಧಿಗೆ ಸ್ಟೈಪೆಂಡ್ ಮಾತ್ರ ನೀಡಲಾಗುವುದು. ಮತ್ತು ಕರ್ನಾಟಕ ಲೋಕ ಸೇವಾ ಆಯೋಗವು ನಡೆಸುವ ಪರೀಕ್ಷೆಗಳಿಗೆ ಹೊರ ಜಿಲ್ಲೆಗಳಿಂದ ಬಂದ ಅಭ್ಯರ್ಥಿಗಳಿಗೆ ಮಾಹೆಯಾನ ರೂ. 6,000/–ರಂತೆ ಸ್ಥಳೀಯ ಅಭ್ಯರ್ಥಿಗಳಿಗೆ ಮಾಹೆಯಾನ 3000 ರೂ ಗಳ ಸ್ಟೈಫೆಂಡ್ ಅನ್ನು ಗರಿಷ್ಠ 6 ತಿಂಗಳಿಗೆ ಮಾತ್ರ ನೀಡಲಾಗುವುದು. |
| 25 | **(ಆ)ಸೇನೆಯಲ್ಲಿ ನೇಮಕಾತಿ ಪೂರ್ವಭಾವಿ ತರಬೇತಿ:–** | ಅಲ್ಪಸಂಖ್ಯಾತ ಸಮುದಾಯದ ಅಭ್ಯರ್ಥಿಗಳಿಗೆ ಸೇನೆಯಲ್ಲಿ ನೇಮಕಾತಿ ಪಡೆಯುವ ಸಲುವಾಗಿ ಪೂರ್ವಭಾವಿ ತರಬೇತಿಯನ್ನು ನೀಡಲು ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.<br>**ಷರತ್ತುಗಳು:**<br>1) ಭಾರತೀಯ ಭೂಸೇನೆ, ನೌಕಾಸೇನೆ, ವಾಯುಸೇನೆ ಹಾಗೂ ಇತ್ಯಾದಿ ಸೇನೆಗಳಿಗೆ ಸೇರಬಯಸುವ ರಾಜ್ಯದ ಅಲ್ಪಸಂಖ್ಯಾತ ವರ್ಗಗಳ ಅರ್ಹ ಅಭ್ಯರ್ಥಿಗಳಿಗೆ ಆಯ್ಕೆಯ ಪೂರ್ವ ಸಿದ್ಧತೆ ಬಗ್ಗೆ ವೃತ್ತಿ ಮಾರ್ಗದರ್ಶನ ಮತ್ತು ತರಬೇತಿಯನ್ನು ನೀಡುವುದು.<br>2) ಸದರಿ ತರಬೇತಿಗೆ ತಗಲುವ ಸಂಪೂರ್ಣ ವೆಚ್ಚವನ್ನು ನಿರ್ದೇಶಕರು, ಅಲ್ಪಸಂಖ್ಯಾತರ ನಿರ್ದೇಶನಾಲಯ ರವರು ಸಂಸ್ಥೆಗೆ ಪಾವತಿಸುವುದು.<br>3) ಸದರಿ ತರಬೇತಿಗೆ ನಿಗದಿತ ಶೈಕ್ಷಣಿಕ, ದೈಹಿಕ ಮತ್ತು ಮಾನಸಿಕ ಅರ್ಹತೆಯನ್ನು ಹೊಂದಿರುವ ಅಲ್ಪಸಂಖ್ಯಾತರ ವರ್ಗಗಳ ಅರ್ಹ ಅಭ್ಯರ್ಥಿಗಳನ್ನು ನಿರ್ದೇಶಕರು, ಅಲ್ಪಸಂಖ್ಯಾತರ ಕಲ್ಯಾಣ ನಿರ್ದೇಶನಾಲಯ ರವರ ಆಯ್ಕೆ ಮಾಡುವುದು.<br>4) ಒಬ್ಬ ಅಭ್ಯರ್ಥಿಗೆ ಒಂದು ಬಾರಿ ಮಾತ್ರ ಸದರಿ ತರಬೇತಿಯ ಸೌಲಭ್ಯವನ್ನು ಒದಗಿಸುವುದು.<br>5) ಅಭ್ಯರ್ಥಿಯ ಕುಟುಂಬದ ವಾರ್ಷಿಕ ಆದಾಯವು ರೂ.6.00 ಲಕ್ಷಕ್ಕಿಂತ ಮೀರಿರಬಾರದು.<br>6) ಅಭ್ಯರ್ಥಿಯು ಕರ್ನಾಟಕ ರಾಜ್ಯದ ನಿವಾಸಿಯಾಗಿರಬೇಕು.<br>7) ತರಬೇತಿ ಪಡೆಯುವ ಅಭ್ಯರ್ಥಿಗಳಿಗೆ ತರಬೇತಿ ಅವಧಿಯಲ್ಲಿ ಶೇ 80 ರಷ್ಟು ಹಾಜರಾತಿಯು ಕಡ್ಡಾಯವಾಗಿರುತ್ತದೆ.<br>8) ತರಬೇತಿಯನ್ನು ಸಕಾರಣವಿಲ್ಲದೇ ಮಧ್ಯಂತರದಲ್ಲಿ ಬಿಟ್ಟು ಹೋಗುವ ಅಭ್ಯರ್ಥಿಗಳಿಂದ, ಅವರ ತರಬೇತಿಗೆ ಆಗಿರುವ ಖರ್ಚು ವೆಚ್ಚವನ್ನು ವಸೂಲಿ ಮಾಡತಕ್ಕದ್ದು.<br>9) ತರಬೇತಿಯನ್ನು ಪೂರ್ಣಗೊಳಿಸಲು ಅಭ್ಯರ್ಥಿಗಳಿಗೆ ಸದರಿ ತರಬೇತಿ ಪಡೆದಿರುವ ಬಗ್ಗೆ ಪ್ರಮಾಣ ಪತ್ರವನ್ನು ವಿತರಿಸುವುದು. |

| | | |
|---|---|---|
| | | 10) ಈಗಾಗಲೇ ದೈಹಿಕ ಪರೀಕ್ಷೆಯಲ್ಲಿ ಆಯ್ಕೆಯಾಗಿರುವ ಅಭ್ಯರ್ಥಿಗಳಿಗೆ ಕೇವಲ ಲಿಖಿತ ಪರೀಕ್ಷೆಯನ್ನು ಮಾತ್ರ ನಡೆಸತಕ್ಕದ್ದು. |
| 26 | (ಇ)Integrated Course:- | ಸರ್ಕಾರದ ಆದೇಶ ಸಂಖ್ಯೆ: ಎಂಡಬ್ಲ್ಯುಡಿ 196 ಎಂಡಿಎಸ್ 2017 ದಿನಾಂಕ: 30.06.2017ರ ಆದೇಶದಲ್ಲಿ ಅಲ್ಪಸಂಖ್ಯಾತ ಸಮುದಾಯಗಳಾದ ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಸಿಖ್ ಬೌದ್ಧ ಮತ್ತು ಪಾರ್ಸಿ ಜನಾಂಗದ ವಿದ್ಯಾರ್ಥಿಗಳಿಗೆ ಪದವಿ ಪೂರ್ವ ಶಿಕ್ಷಣದ ಜೊತೆಗೆ IIT, IIM ಹಾಗೂ ಇತರೆ ಕೋರ್ಸ್‌ಗಳಿಗೆ ಮತ್ತು ಪದವಿಯ ಜೊತೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರದ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ನೀಡುವ Integrated Course ಗಳಿಗೆ ತರಬೇತಿಯನ್ನು ನೀಡಲು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಮಂಜೂರಾತಿ ನೀಡಿ ಆದೇಶಿಸಿದೆ.<br>**ಷರತ್ತುಗಳು:-**<br>1) ಪ್ರತಿಷ್ಠಿತ ಖಾಸಗಿ ಸಂಸ್ಥೆಗಳಲ್ಲಿ ಮೂಲಕ IIT, IIM, IISC, IITs, IIITs, NITs, IIMs, IISERs, AIIMS, NLU, INIs, INI & IuSLAs ಹಾಗೂ Super -30 ಕೋರ್ಸ್‌ಗಳಿಗೆ ಪದವಿ ಪೂರ್ವ ವಿದ್ಯಾಭ್ಯಾಸದ ಜೊತೆಗೆ **Integrated** ತರಬೇತಿ ನೀಡುವುದು.<br>2) ಪ್ರತಿಷ್ಠಿತ ಖಾಸಗಿ ಸಂಸ್ಥೆಗಳಲ್ಲಿ ಪದವಿಯಲ್ಲಿ ವ್ಯಾಸಂಗ ಮಾಡುತ್ತಿರುವ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರದ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ನೀಡುವಂತಹ ಸಂಸ್ಥೆಗಳಲ್ಲಿ ನಿಯೋಜಿಸತಕ್ಕದ್ದು.<br>3) ಈ ಯೋಜನೆಗೆ ಆನ್‌ಲೈನ್ ಮೂಲಕ ಅರ್ಜಿಯನ್ನು ಆಹ್ವಾನಿಸಿ ವಿದ್ಯಾರ್ಥಿಗಳನ್ನು ಆಯ್ಕೆ ಮಾಡಲು ನಿರ್ದೇಶಕರು, ಅಲ್ಪಸಂಖ್ಯಾತರ ನಿರ್ದೇಶನಾಲಯ ಬೆಂಗಳೂರು ರವರ ಕ್ರಮವಹಿಸತಕ್ಕದ್ದು.<br>4) ಕರ್ನಾಟಕ ಪಾರದರ್ಶಕತೆ ಕಾಯ್ದೆಯನ್ವಯ ತರಬೇತಿ ಸಂಸ್ಥೆಗಳನ್ನು ನಿರ್ದೇಶಕರು, ಅಲ್ಪಸಂಖ್ಯಾತರ ನಿರ್ದೇಶನಾಲಯ, ಬೆಂಗಳೂರು ರವರ ಆಯ್ಕೆ ಮಾಡತಕ್ಕದ್ದು.<br>5) ಈ ಯೋಜನೆಯನ್ನು ಪ್ರಸಕ್ತ ಸಾಲಿನಲ್ಲಿ ವಿದ್ಯಾರ್ಥಿಗಳಿಗೆ ಜನಸಂಖ್ಯೆಯ ಅನುಪಾತಕ್ಕನುಗುಣವಾಗಿ ಆಯ್ಕೆ ಮಾಡಲು ಕ್ರಮವಹಿಸತಕ್ಕದ್ದು.<br>6) ವಿದ್ಯಾರ್ಥಿಯು ಕರ್ನಾಟಕದ ನಿವಾಸಿಯಾಗಿರಬೇಕು. (ಹೊರ ರಾಜ್ಯಗಳಿಂದ ಬಂದು ಕರ್ನಾಟಕ ರಾಜ್ಯದಲ್ಲಿ ವ್ಯಾಸಂಗ ಮಾಡುತ್ತಿರುವ ಅಲ್ಪಸಂಖ್ಯಾತರ ಸಮುದಾಯದ ವಿದ್ಯಾರ್ಥಿಗಳು ಅರ್ಹರಾಗಿರುವುದಿಲ್ಲ.<br>7) ವಿದ್ಯಾರ್ಥಿಯ ಕುಟುಂಬದ ವಾರ್ಷಿಕ ಆದಾಯವು ರೂ.6.00 ಲಕ್ಷಕ್ಕಿಂತ ಮೀರಿರಬಾರದು.<br>8) ಆಯ್ಕೆಯಾದ ವಿದ್ಯಾರ್ಥಿಗಳಿಗೆ ವ್ಯಾಸಂಗದ ಜೊತೆ ಊಟ ಮತ್ತು ವಸತಿ ಸೌಲಭ್ಯ ಒದಗಿಸತಕ್ಕದ್ದು |
| 27 | ಸರ್ಕಾರಿ ಅಲ್ಪಸಂಖ್ಯಾತರ ಶಾಲೆಗಳಿಗೆ ಶಿಕ್ಷಣ ಮತ್ತು ಕಲಿಕೆ ಸಾಧನಗಳು:- | ಸರ್ಕಾರಿ ಆದೇಶ ಸಂಖ್ಯೆ MWD 233 MDS 2014, ದಿನಾಂಕ: 26.06.2014ರಲ್ಲಿ ದಿನಾಂಕ: 06.02.2014ರ ಸರ್ಕಾರಿ ಆದೇಶವನ್ನು ಮಾರ್ಪಡಿಸಿ ಈಗಾಗಲೇ ಅಲ್ಪಸಂಖ್ಯಾತರ ಸರ್ಕಾರಿ/ಖಾಸಗಿ ಅನುದಾನಿತ/ಅನುದಾನ ರಹಿತ/ವಸತಿ ಶಾಲೆಗಳು/ವಸತಿ ನಿಲಯಗಳಿಗೆ ಹಾಗೂ ಸರ್ಕಾರಿ ವಸತಿನಿಲಯಗಳು ಮತ್ತು ವಸತಿ ಶಾಲೆಗಳಿಗೂ ರೂ. 10,000/- ಗಳಿಗೆ ಮೀರದಂತೆ ಕಲಿಕೆ ಮತ್ತು ಭೋಧನಾ ಸಾಮಾಗ್ರಿಗಳಿಗೆ ನೀಡುತ್ತಿರುವ ಅನುದಾನದ ಕಾರ್ಯಕ್ರಮವನ್ನು ಮುಂದುವರೆಸುತ್ತಾ, ಅಲ್ಪಸಂಖ್ಯಾತರ ಸರ್ಕಾರಿ ಅನುದಾನಿತ ಅನುದಾನ ರಹಿತ ಉರ್ದು ಶಾಲೆಗಳಿಗೆ/ವಸತಿನಿಲಯ/ವಸತಿ ಶಾಲೆಗಳಿಗೆ ಇ-ಲರ್ನಿಂಗ್ ಮೂಲಕ ಭೋಧನಾ ಸಾಮಾಗ್ರಿಗಳನ್ನು ಆಯಾ ವರ್ಷದ ಅನುದಾನದ ಹಂತ ಹಂತವಾಗಿ ಮಿತಿಯೊಳಗೆ ಆದ್ಯತಾನುಸಾರ ನೀಡಿ ವಿದುನ್ಮಾನ ಕಲಿಕೆ ಮೂಲಕ ಹೊಸ ತಂತ್ರಜ್ಞಾನದ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಲಾಗುತ್ತಿದೆ |
| | | **ಅಲ್ಪಸಂಖ್ಯಾತರಿಗಾಗಿ ವಸತಿ ನಿಲಯ ಮತ್ತು ವಸತಿ ಶಾಲೆ ಕಟ್ಟಡಗಳ ನಿರ್ಮಾಣ** |
| 28 | ಕಟ್ಟಡ ನಿರ್ಮಾಣ:- | ರಾಜ್ಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಮೊರಾರ್ಜಿದೇಸಾಯಿ ವಸತಿ ಶಾಲೆ/ಕಾಲೇಜು ಹಾಗೂ ಮಾದರಿ ವಸತಿ ಶಾಲೆ, ಮೌಲಾನಾ ಆಜಾದ್‌ಭವನ, ಮೌಲಾನಾ ಆಜಾದ್ ಮಾದರಿ ಶಾಲೆ ಹಾಗೂ ಉದ್ಯೋಗಸ್ಥ ಮಹಿಳೆಯರ ವಸತಿ ನಿಲಯಗಳ ಕಟ್ಟಡ ನಿರ್ಮಾಣ ಹಾಗೂ ದುರಸ್ತಿ ಹಾಗೂ ನವೀಕರಣದ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ. ನಾಗರೀಕ ಸೌಲಭ್ಯದ ನಿವೇಶನಗಳ ಖರೀದಿ, ಹಿಂದುಳಿದ, ಅತ್ಯಂತ ಹಿಂದುಳಿದ ತಾಲ್ಲೂಕುಗಳಲ್ಲಿನ |

ನಿರ್ಮಾಣದ ಕಾಮಗಾರಿಗಳನ್ನು ಈ ಯೋಜನೆಯಡಿ ಕೈಗೊಳ್ಳಲಾಗುವುದು.

29 **<u>11 ಕಾರ್ಪೋರೇಷನ್‌ಗಳಲ್ಲಿ ಅಲ್ಪಸಂಖ್ಯಾತರ ಸ್ಲಮ್/ ಕಾಲೋನಿ ಅಭಿವೃದ್ಧಿ ಯೋಜನೆ:-</u>**

ಸನ್ಮಾನ್ಯ ಮುಖ್ಯಮಂತ್ರಿಯವರು 2020-21ನೇ ಸಾಲಿನ ಆಯವ್ಯಯ ಭಾಷಣದ ಕಂಡಿಕೆ-91ರಲ್ಲಿ ಘೋಷಿಸಿರುವಂತೆ, ಬೆಂಗಳೂರು ಸೇರಿದಂತೆ ರಾಜ್ಯದ ಈ ಕೆಳಕಂಡ 10 ಮಹಾನಗರ ಪಾಲಿಕೆಗಳ ವ್ಯಾಪ್ತಿಯಲ್ಲಿ ಅಲ್ಪಸಂಖ್ಯಾತರು ಹೆಚ್ಚಾಗಿ ವಾಸಿಸುವ ಅಧಿಸೂಚಿತವಲ್ಲದ ಕೊಳಗೇರಿ ಪ್ರದೇಶಗಳಲ್ಲಿ ರೂ.50.00 ಕೋಟಿಗಳ ಕ್ರಿಯಾ ಯೋಜನೆಗಳನ್ನು ಈ ಕೆಳಕಂಡ ಮೂಲಸೌಕರ್ಯಗಳನ್ನು ಒದಗಿಸಲು ಮಾರ್ಗಸೂಚಿಗಳೊಂದಿಗೆ ಅನುಷ್ಠಾನಗೊಳಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

(ರೂ. ಕೋಟಿಗಳಲ್ಲಿ)

| ಕ್ರ.ಸಂ | ಜಿಲ್ಲೆ | ಮಹಾನಗರ ಪಾಲಿಕೆ | ಕಾಮಗಾರಿಗಳನ್ನು ಕೈಗೊಳ್ಳಲು ಅಂದಾಜು ಮೊತ್ತ |
|---|---|---|---|
| 1 | ಬೆಂಗಳೂರು ನಗರ | ಬಿ.ಬಿ.ಎಂ.ಪಿ | 20.00 |
| 2 | ಧಾರವಾಡ | ಧಾರವಾಡ | 2.50 |
| 3 | ಮೈಸೂರು | ಮೈಸೂರು | 3.00 |
| 4 | ದಕ್ಷಿಣ ಕನ್ನಡ | ದಕ್ಷಿಣ ಕನ್ನಡ | 3.00 |
| 5 | ಕಲಬುರಗಿ | ಕಲಬುರಗಿ | 3.00 |
| 6 | ಶಿವಮೊಗ್ಗ | ಶಿವಮೊಗ್ಗ | 3.00 |
| 7 | ತುಮಕೂರು | ತುಮಕೂರು | 2.50 |
| 8 | ವಿಜಯಪುರ | ವಿಜಯಪುರ | 3.00 |
| 9 | ಬೆಳಗಾವಿ | ಬೆಳಗಾವಿ | 3.00 |
| 10 | ಬಳ್ಳಾರಿ | ಬಳ್ಳಾರಿ | 3.00 |
| 11 | ದಾವಣಗೆರೆ | ದಾವಣಗೆರೆ | 3.00 |
| 12 | ಶೇ.1 ರಷ್ಟು ಐ.ಸಿ.ಡಿ ಶುಲ್ಕ | - | 1.00 |
| | | ಒಟ್ಟು | 50.00 |

1. ರಸ್ತೆ ಮತ್ತು ಚರಂಡಿ/ ಒಳಚರಂಡಿ ನಿರ್ಮಾಣ.
2. ಶುದ್ಧ ಕುಡಿಯುವ ನೀರಿನ ವ್ಯವಸ್ಥೆ ಕಲ್ಪಿಸುವುದು.
3. ಅಗತ್ಯವಿದ್ದಲ್ಲಿ ಕೊಳವೆ ಬಾವಿ ಕೊರೆಯುವುದು.
4. ಅಗತ್ಯವಿದ್ದಲ್ಲಿ ಸಾಮೂಹಿಕ ಶೌಚಾಲಯಗಳ ನಿರ್ಮಾಣ

ಮೇಲ್ಕಂಡ ಮಹಾನಗರ ಪಾಲಿಕೆಗಳ ವ್ಯಾಪ್ತಿಗೆ ಬರುವ ಪ್ರತಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಅಲ್ಪಸಂಖ್ಯಾತರು ಹೆಚ್ಚಾಗಿ ವಾಸಿಸುವ ಅಧಿಸೂಚಿತವಲ್ಲದ ಕೊಳಗೇರಿ ಪ್ರದೇಶಗಳಲ್ಲಿ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಕಾಮಗಾರಿಯನ್ನು ಕೈಗೊಳ್ಳಲು ತಲಾ ರೂ.25.00

| | | |
|---|---|---|
| | | ಲಕ್ಷಗಳನ್ನು (ಇಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ಮಂಜೂರು ಮಾಡಿ ಆದೇಶಿಸಿದೆ. |
| 30 | ಪ್ರಧಾನ ಮಂತ್ರಿ ಜನ ವಿಕಾಸ ಕಾರ್ಯಕ್ರಮ:- | ಭಾರತ ಸರ್ಕಾರವು 6 ಕ್ಷೇತ್ರಗಳು 28 ಪಟ್ಟಣಗಳು ಒಟ್ಟು 21 ಜಿಲ್ಲೆಗಳಲ್ಲಿ ಶೇಕಡ 25% ಕ್ಕಿಂತ ಹೆಚ್ಚಿನ ಜನಸಂಖ್ಯೆಯು ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆಯಿಂದ ಕಡಿಮೆ ಇರುವ ಪ್ರದೇಶಗಳಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br><br>ಈ ಯೋಜನೆಯು ಅಲ್ಪಸಂಖ್ಯಾತರಿಗೆ ಬೇಕಾಗಿರುವ ಮೂಲ ಸೌಕರ್ಯಗಳನ್ನು ನೀಡಿ ಅವರ ಆರ್ಥಿಕ ಮತ್ತು ಸಾಮಾಜಿಕ ಏಳಿಗೆಗಾಗಿ ಮತ್ತು ಗುಣಮಟ್ಟದ ಕೊರತೆಯನ್ನು ಸರಿಪಡಿಸಲು ಅಲ್ಪಸಂಖ್ಯಾತರು ಹೆಚ್ಚು ಇರುವ ಸ್ಥಳಗಳಲ್ಲಿ ಈ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯಡಿ ಅಲ್ಪಸಂಖ್ಯಾತರಿಗೆ ಶಾಲೆಗಳು, ವಸತಿ ನಿಲಯಗಳು, ವಸತಿ ಶಾಲೆಗಳು, ಆರೋಗ್ಯ, ನಿರ್ಮಲ್ಯ ಸೌಕರ್ಯಗಳು, ಸರ್ಕಾರಿ ಶಾಲೆಗಳಿಗೆ ತಂತ್ರಜ್ಞಾನ ಸೌಕರ್ಯ ಕಲ್ಪಿಸುವುದು, ದುಡಿಯುವ ಮಹಿಳೆಯರ ವಸತಿ ನಿಲಯಗಳಿಗೆ ಮೂಲಭೂತ ಸೌಕರ್ಯಗಳನ್ನು ಭರಿಸುವುದು ಇತ್ಯಾದಿಗಳು. ಸದರಿ ಯೋಜನೆಯು ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳ ಮೂಲಕ ಅನುಷ್ಠಾನಗೊಳಿಸಲಾಗುತ್ತಿದೆ. |
| 31 | ಅಲ್ಪಸಂಖ್ಯಾತರಗಾಗಿ ಕಾನೂನು ಪದವೀಧರರಿಗೆ ತರಬೇತಿ ಭತ್ಯೆ:- | ಅಲ್ಪಸಂಖ್ಯಾತರ ಕಾನೂನು ಪದವೀಧರರಿಗೆ ನೀಡುತ್ತಿರುವ ಮಾಸಿಕ ಪ್ರೋತ್ಸಾಹಧನವನ್ನು ರೂ.5,000/-ಗಳಿಗೆ ಮಂಜೂರಾತಿ ನೀಡಿ ಆದೇಶಿಸಿದೆ. ತರಬೇತಿ ಅವಧಿಯು 4 ವರ್ಷಗಳಾಗಿದ್ದು ತರಬೇತಿ ಅವಧಿಯಲ್ಲಿ ಪ್ರತಿ ಅಭ್ಯರ್ಥಿಗೆ ಮಾಹೆಯಾನ ರೂ.5,000/-ದಂತೆ ತರಬೇತಿ ಭತ್ಯೆ ನೀಡಲಾಗುವುದು. ಈ ತರಬೇತಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಜಿಲ್ಲಾ ಮಟ್ಟದಲ್ಲಿ, ಜಿಲ್ಲಾ ಆಯ್ಕೆ ಸಮಿತಿಯಲ್ಲಿ ಆಯ್ಕೆ ಮಾಡುವುದು.<br><br>**ಈ ಕಾರ್ಯಕ್ರಮಕ್ಕೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಲು ಈ ಕೆಳಕಂಡ ಮುಖ್ಯ ಅಂಶಗಳನ್ನು ಗಮನಿಸಬೇಕು.**<br>(1) ಕಾನೂನು ತರಬೇತಿ ಪಡೆಯುವ ಅಭ್ಯರ್ಥಿಯು ಮುಸ್ಲಿಂ, ಕ್ರಿಶ್ಚಿಯನ್, ಜೈನ್, ಬೌದ್ಧ, ಸಿಖ್ ಮತ್ತು ಪಾರ್ಸಿ ಸಮುದಾಯಗಳಲ್ಲಿ ಯಾವುದಾದರೊಂದು ಸಮುದಾಯಕ್ಕೆ ಸೇರಿದ್ದು ರಾಜ್ಯದ ನಿವಾಸಿಯಾಗಿರಬೇಕು.<br>(2) ಅಭ್ಯರ್ಥಿಯ ಕುಟುಂಬದ ವಾರ್ಷಿಕ ಆದಾಯವು ರೂ. 3.50 ಲಕ್ಷಕ್ಕೆ ಮೀರಿರಬಾರದು.<br>(3) ಅಭ್ಯರ್ಥಿಯು ಬಾರ್ ಕೌನ್ಸಿಲ್‌ನಲ್ಲಿ ಹೆಸರನ್ನು ನೊಂದಾಯಿಸಿರಬೇಕು.<br>(4) ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕಡೆಯ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು 30 ವರ್ಷಗಳೊಳಗೆ ಇರಬೇಕು ಮತ್ತು ಅರ್ಜಿ ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕಕ್ಕೆ ಅಭ್ಯರ್ಥಿಯು 2 ವರ್ಷಗಳ ಅವಧಿಯೊಳಗೆ ಕಾನೂನು ಪದವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರಬೇಕು.<br>(5) ಅಭ್ಯರ್ಥಿಗಳ ಆಯ್ಕೆಯನ್ನು ಜಿಲ್ಲಾ ಆಯ್ಕೆ ಸಮಿತಿಯ ಮೂಲಕ ಮಾಡಲಾಗುವುದು.<br>(6) ಪ್ರತಿ ಜಿಲ್ಲೆಗೆ ಎರಡು ಅಭ್ಯರ್ಥಿಗಳನ್ನು ಆಯ್ಕೆ ಮಾಡಬೇಕಾಗಿರುವುದರಿಂದ ಇವುಗಳಲ್ಲಿ ಒಬ್ಬ ಅಭ್ಯರ್ಥಿಯನ್ನು ಮುಸ್ಲಿಂ ಹಾಗೂ ಇನ್ನೊಬ್ಬ ಅಭ್ಯರ್ಥಿಯನ್ನು ಇತರೆ ಅಲ್ಪಸಂಖ್ಯಾತರ ಸಮುದಾಯಗಳಿಂದ ಆಯ್ಕೆ ಮಾಡಬೇಕು. |

| | | |
|---|---|---|
| | | **ಅಲ್ಪಸಂಖ್ಯಾತರ ಅನಾಥಾಲಯಗಳು/ಖಾಸಗಿ ವಿದ್ಯಾರ್ಥಿನಿಲಯಗಳು** |
| 32 | **(ಅ) ಖಾಸಗಿ ಅನುದಾನಿತ ಅನಾಥಾಲಯಗಳು:-** | ಅನಾಥ ಮತ್ತು ನಿರ್ಗತಿಕ ಮಕ್ಕಳ ಶಿಕ್ಷಣಕ್ಕೆ ಅನುಕೂಲವಾಗುವಂತೆ ಕೆಲವು ಸ್ವಯಂ ಸೇವಾ ಸಂಸ್ಥೆಗಳು ಅನಾಥಾಲಯಗಳನ್ನು ನಡೆಸುತ್ತಿವೆ. ಈ ಅನಾಥಾಲಯಗಳಲ್ಲಿ ಮಕ್ಕಳನ್ನು ಅವರ ಪ್ರೌಢ ಶಾಲಾ ಶಿಕ್ಷಣ ಮುಗಿಯುವವರೆಗೆ ಪೋಷಿಸಲು ಅವಕಾಶ ಕಲ್ಪಿಸಲಾಗುತ್ತದೆ. ಇಂತಹ ಅನಾಥಾಲಯಗಳಿಗೆ ಪ್ರೋತ್ಸಾಹ/ನೆರವು ನೀಡುವ ದೃಷ್ಟಿಯಿಂದ ಸಹಾಯಧನ ಮಂಜೂರಾತಿಗೆ ಮನವಿ ಸಲ್ಲಿಸುವ ಸಂಸ್ಥೆಗಳಿಗೆ ಮಾನ್ಯತೆ ನೀಡಿ ಸಹಾಯಧನ ಮಂಜೂರು ಮಾಡುವುದು ಈ ಕಾರ್ಯಕ್ರಮದ ಉದ್ದೇಶವಾಗಿರುತ್ತದೆ. ರಾಜ್ಯದಲ್ಲಿ ಇಂತಹ ಒಟ್ಟು 27 ಖಾಸಗಿ ಅನಾಥಾಲಯಗಳಿವೆ. ಅವುಗಳಲ್ಲಿ ಒಟ್ಟು 2530 ನಿಲಯಾರ್ಥಿಗಳ ಮಂಜೂರಾತಿ ಸಂಖ್ಯೆ ಮಾಹೆಯಾನ ರೂ.800/-ರ ದರದಲ್ಲಿ ವರ್ಷದ 12 ತಿಂಗಳುಗಳಿಗೆ ಆಹಾರ ಬಾಬ್ತು ಸಹಾಯಧನ ಮಂಜೂರು ಮಾಡಲಾಗುತ್ತದೆ.<br>**ನಿಬಂಧನೆಗಳು:**<br>1. ಅನಾಥ ವಿದ್ಯಾರ್ಥಿಗಳಿಗೆ ಆದಾಯಮಿತಿ ಇರುವುದಿಲ್ಲ.<br>2. ನಿರ್ಗತಿಕ ವಿದ್ಯಾರ್ಥಿಗಳು ವಾರ್ಷಿಕ ಆದಾಯಮಿತಿ ಪ್ರವರ್ಗ-1 ರೂ. 1.00 ಲಕ್ಷ.<br>ಪ್ರವರ್ಗ-2ಎ, 2ಬಿ, ಮತ್ತು 3ಬಿ ರೂ. 44,500/- ನಿಗದಿಪಡಿಸಿದೆ.<br>3. 1 ರಿಂದ 10ನೇ ತರಗತಿಯವರೆಗೆ ವ್ಯಾಸಂಗ ಮಾಡುತ್ತಿರುವ ನಿರ್ಗತಿಕ ಹಾಗೂ ಅನಾಥ ಮಕ್ಕಳು ಸೌಲಭ್ಯಕ್ಕೆ ಅರ್ಹರು. |
| 33 | **(ಆ) ಖಾಸಗಿ ಅಲ್ಪಸಂಖ್ಯಾತರ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು:-** | ರಾಜ್ಯದಲ್ಲಿ ಸ್ವಯಂ ಸೇವಾ ಸಂಸ್ಥೆಗಳು ನಡೆಸುತ್ತಿರುವ 48 ಖಾಸಗಿ ಅಲ್ಪಸಂಖ್ಯಾತರ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು ಪ್ರೋತ್ಸಾಹ ಹಾಗೂ ನೆರವು ನೀಡುವ ದೃಷ್ಟಿಯಿಂದ 4436 ವಿದ್ಯಾರ್ಥಿಗಳಿಗೆ ಭೋಜನಾ ವೆಚ್ಚವನ್ನು ನೀಡಲಾಗುತ್ತಿದೆ. ಪ್ರತಿ ವಿದ್ಯಾರ್ಥಿಗೆ ಮಾಹೆಯಾನ ರೂ.800/- ರಂತೆ 10 ತಿಂಗಳ ಅವಧಿಗೆ ಆಹಾರ ವೆಚ್ಚ ನೀಡಲಾಗುವುದು. ವಿದ್ಯಾರ್ಥಿನಿಲಯಗಳು ಚಾಲ್ತಿಯಲ್ಲಿರುವ ನಿಯಮಾನುಸಾರ ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ ಕಲ್ಪಿಸತಕ್ಕದ್ದು.<br>**ನಿಬಂಧನೆಗಳು:-**<br>1. ಪ್ರವರ್ಗ-1ರ ವಿದ್ಯಾರ್ಥಿಗಳಿಗೆ ರೂ. 1.00 ಲಕ್ಷ ಹಾಗೂ 2ಎ, 2ಬಿ, 3ಬಿ ವಿದ್ಯಾರ್ಥಿಗಳಿಗೆ ರೂ. 1.00 ಲಕ್ಷ ಆದಾಯಮಿತಿ ನಿಗದಿಪಡಿಸಿದೆ.<br>2. 5 ರಿಂದ 10ನೇ ತರಗತಿಯವರೆಗಿನ ವಿದ್ಯಾರ್ಥಿಗಳಿಗೆ ಪ್ರವೇಶಾವಕಾಶ. |